। ಓಂ ॥

# ಶ್ರೀ ವೀರಭದ್ರೇಶ್ವರ ಪುರಾಣ





...ಹೂರು ಚಾಗಿ ಹಿರೇಮಠದ ಚೆನ್ನಬಸವಕವಿ ಕೃತ



ಈ ಪುರಾಣ ಮುದ್ರಣಕ್ಕೆ ಸಹಾಯ ಮಾಡಿದ ಮಹಾಶಯರು



ರೂ. ೧೦೧-೦೦ ಶ್ರೀಮಾನ್ ರಾಮದುರ್ಗ ರುದ್ರಪ್ಪ ಹಿರೇಕೊಟ್ನಕಲ್ಲು
,, ೧೦೧-೦೦ ,, ವೀರಪ್ಪ ಹಿರೇಕೊಟ್ನಕಲ್ಲು
,, ೧೦೧-೦೦ ,, ಪೆಂಡ್ಲಿಕುಲ ದೊಡ್ಡ ವೀರಣ್ಣಶೆಟ್ಟಿ ರಾಯಚೂರು
,, ೧೦೧-೦೦ ,, ಸಣ್ಣ ಭೀಮಪ್ಪಗೌಡ ಶಿಂಗನವಿಡಿ
,, ೫೧-೦೦ ,, ಮಾ|| ಪಾ|| ಸದಾಶಿವಪ್ಪಗೌಡ ಶಿಂಗನವಿಡಿ
,, ೫೧-೦೦ ,, ಮಾ|| ಪಾ|| ರಾಮನಗೌಡ ಮಂಡ್ಲಿಗಿರಿ
,, ೨೫-೦೦ ,, ಪೋ|| ಪಾ|| ತಿಮ್ಮರಡ್ಡೆಪ್ಪ ಶಿಂಗನವಿಡಿ
,, ೫೧-೦೦ ,, ದಾಸರ ವೀರಣ್ಣ ಹಿರೇಕೊಟ್ನಕಲ್.

ಈ ಮಹಾಶಯರೆಲ್ಲರಿಗೂ ಮತ್ತು ಸಕಾಲಕ್ಕೆ ಶ್ರೀ ವೀರಭದ್ರದೇವರ ಚಿತ್ರವನ್ನು ಸುಂದರವಾಗಿ ಚಿತ್ರಿಸಿಕೊಟ್ಟ ಶ್ರೀ ಬೆಟ್ಟದೂರು ಶಂಕ್ರಪ್ಪನವರಿಗೂ ಪರಮೇಶ್ವರನು ಆಯುರಾರೋಗ್ಯೈಶ್ವರ್ಯಗಳನ್ನು ಕೊಟ್ಟು ಕಾಪಾಡಲಿ.



ಜಯ ಭದ್ರಗುಣಾಧಾರ ।
ಜಯ ರುದ್ರಗಣಾದೃತ ।
ಜಯ ಶ್ರೀವೀರಭದ್ರೇಶ ।
ಜಯ ಕಾಳೀಮನೋಹರ ॥



ಶ್ರೀ ಜಗದ್ಗುರು ರೇಣುಕಾಚಾರ್ಯ ಪ್ರಸನ್ನ ಃ



ಶ್ರೀ ೧೦೦೮ ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಪಾದಸನ್ನಿಧಿಯಲ್ಲಿ ಈ ಗ್ರಂಥರತ್ನವನ್ನು ಭಕ್ತಿ ಪೂರ್ವಕವಾಗಿ ಸಮರ್ಪಿಸಿದ್ದೇನೆ.

ಮಹಾಚಾರ್ಯ ಶೇವಕ

ವೇ॥ ಪಂ॥ ಚೆನ್ನಬಸವಕವಿ ಚಾಗಿಹಿರೇಮಠ ರಾಯಚೂರು

ಶ್ರೀ

# ಮುನ್ನುಡಿ

ಶಿವನ ಹಣೆಗಣ್ಣಿನಿಂದುದಯಿಸಿದ ಅಮಿತ ತೇಜೋರಾಶಿ ವೀರಭದ್ರನ ಅಗಾಧ ಮಹಿಮೆಗಳನ್ನು ಮಹಾಕವಿಗಳು ಮನವಾರೆ ಬಣ್ಣಿಸಿರುವುದು ಸ್ಕಾಂದಪುರಾಣ ಲಿಂಗಪುರಾಣ ವಾಯುವೀಯಸಂಹಿತೆ. ಮಹಾಭಾರತ ಭಾಗವತಾದಿ ಗ್ರಂಥಗಳಿಂದ ತಿಳಿದು ಬರುತ್ತದೆ ಆ ತರುವಾಯದ ಕನ್ನಡ ಕವಿಕುಲ ಚಕ್ರವರ್ತಿಗಳೆನಿಸಿದ ಹಂಪೆಯ ಹರಿಹರ, ರಾಘವಾಂಕರೆಂಬ ವೀರಶೈವ ಕವಿಗಳು ತಾವು ಬರೆದ ವೀರಭದ್ರರಗಳೆ ವೀರೇಶ ಚರಿತೆಗಳೆಂಬ ಖಂಡಕಾವ್ಯಗಳಲ್ಲಿ ಶ್ರೀ ವೀರಭದ್ರನ ಹಿರಿಮೆಯನ್ನು ಹೆಮ್ಮೆಯಿಂದ ಹೊಗಳಿರುವರು " ಬಹ್ವೈ್ಯವಶರಭಸ್ಸಾಕ್ಷಾನ್ಮೋಕ್ಷದೋಯಂ ಮಹಾಮುನೇ" ಎಂಬ ಶರಭೋಪನಿಷದ್ವಾಕ್ಯದಂತೆ ವೀರಭದ್ರನು ಶಿವಾವತಾರನೆಂಬುದು ಸಿದ್ಧವಾಗುವುದಾದರೆ ವೀರಭದ್ರ ಪದದಲ್ಲಿಯ ವೀರಶಬ್ದವು ಕೇವಲ ಪರಾಕ್ರಮವಾಚಕವಾಗಿರದೆ. ಅಪ್ರಾಕೃತ ವೀರಧರ್ಮ ಸೂಚಕವಾಗಿದೆ ಎಂದು ಗೊತ್ತಾಗುತ್ತದೆ.

ದಕ್ಷಿಣ ಭಾರತದ ಹಲಕೆಲವು ಪುರಾತನ ದೇವಾಲಯಗಳಲ್ಲಿ ನಿಂತಿರುವ ವೀರಭದ್ರವಿಗ್ರಹಗಳನ್ನು ವೀಕ್ಷಿಸಿದಲ್ಲಿ ಕಂಡುಬರುವ ಭಸ್ಮಧಾರಣ ರುದ್ರಾಕ್ಷಧಾರಣ ಹಣೆಯಲ್ಲಿ ಶಿವಲಿಂಗ ಮುಂತಾದ ಕುರುಹುಗಳಿಂದ ಈ ಪ್ರತಿಮೆ ವೀರಶೈವ ಪ್ರತೀಕವೆನಿಸದಿರಲಾರದು.

" ಸೊಡರ್ಗುಡಿ ವೆಳಗಿನ ವೈವಣ್ಣಂ ನಿಡುಜಡೆ ಮುಡಿ ।
ನಡುನೆತ್ತಿಯ ಲಿಂಗಂ ಮುಕುಟಂ ಫಣಿಕುಂಡಲ ॥ "

ರಾಘವಾಂಕ ಕವಿಯ ಈಮೀಸಲ ಕವಿತೆಯಿಂದಲೂ ಈ ದೇವರ ಲಿಂಗವಂತಿಕೆ ತಾನಾಗಿ ವ್ಯಕ್ತವಾಗುವದು ಇಂತಹ ಲಿಂಗಧಾರಿ ವೀರಭದ್ರನಿಂದ ಮಾರುತಿ ಲಿಂಗವನ್ನು ಪಡೆದನೆಂಬ ಕಥಾನಕವು ನಿಜಕ್ಕು ಇಲ್ಲಿ ಸಲ್ಲುವುದಾಗಿದೆ.

ವೀರನಂದೀಭೃಂಗಿ ವೃಷಭ ಸ್ಕಂದರೆಂಬ ಗಣವರರು ಜ್ಯೋತಿಯಿಂದುದಯಿಸಿದ ಜ್ಯೋತಿಯಂತೆ ಶಿವನ ಅಭಿನ್ನಾತ್ಮರೂ ವೀರಶೈವ ಗೋತ್ರನಾಯಕರೆಂಬ ಆಗಮೋಕ್ತಿಯೂ ಪ್ರಸ್ತುತಕ್ಕೆ ಸಂಗತವೆನಿಸಿವೆ ವೀರಭದ್ರನ ದಕ್ಷತೆಗೆ ಮೆಚ್ಚಿದ ಬಸವಣ್ಣನವರು ತಮ್ಮ ವಚನದಲ್ಲಿ

" ನಾರಾಯಣನೆಂಬುವನಕಾಣೆ ಗಿರಾಯಣನೆಂಬುವ
ನಕಾಣೆ ಬೊಮ್ಮನೆಂಬುವನಕಾಣೆ ಗಿಮ್ಮನೆಂಬುವನಕಾಣೆ
ವಿಷಹುಟ್ಟಿಸುಡುವಲ್ಲಿ ವೀರಭದ್ರಬಡಿವಲ್ಲಿ ಕೂಡಲಸಂ
ಗಮ ದೇವಯ್ಯಂಗೆ ಶರಣೆಂದು ಮೊರೆಯಿಟ್ಟರೆಲ್ಲರು "

ಈ ರೀತಿ ಅತ್ಯುಲ್ಲಾಸದಿಂದ ಹೇಳಿಕೊಂಡಿರುವರು.

ವೇ|| ಪಂ|| ಸಿ|| ಕವಿಭೂಷಣ ಶ್ರೀ ಚೆನ್ನಬಸವ ಶಾಸ್ತ್ರಿಗಳವರು ಚಾಗಿಹಿರೇಮಠ ಭವಿಷ್ಯಕಾರ್ಯಾಲಯ ರಾಯಚೂರು, ಈ ಕವಿಗಳು ವಿಜಯ ವೀರಭದ್ರನ ವಿಸ್ಮಯಕರ ಲೀಲೆಗಳನ್ನು ಸಂಸ್ಕೃತ ಕನ್ನಡ ಮಹಾಪುರಾಣಗಳಿಂದ ಒಟ್ಟಯಿಸಿ ಸ್ವತಂತ್ರವಾಗಿ ಶ್ರೀ ವೀರಭದ್ರೇಶ್ವರ ಪುರಾಣವೆಂಬ ಅಮೋಘ ಪುಸ್ತಕವನ್ನು ಬರೆದು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುವರು ಇದರ ಛಂದಸ್ಸು ಷಟ್ಪದಿಯೂ ಗಿದ್ದು ಕವಿತೆ, ಶ್ರವಣ ಮಾತ್ರದಿಂದ ವೇದ್ಯವಾಗಬಲ್ಲ ಸರಳ ಕನ್ನಡ ಭಾಷೆಯಲ್ಲಿ ಒಳ್ಳೇ ಸ್ವಾರಸ್ಯವಾಗಿದೆ ಸಾಹಿತ್ಯರಂಗದಲ್ಲಿ ಪಳಗಿದ ಕವಿತೆಯಂತೆ ಇವರ ಈ ರಚನೆ ಕವಿಸಮಯವನ್ನು ಮೀರದೆ ವರ್ಣಿಸಿದೆ ಎಂದರುಹಲು ತುಂಬಾ ಆನಂದವೆನಿಸುತ್ತದೆ

ಶ್ರೀ ಶಾಸ್ತ್ರಿಗಳು ಶಿವರಾತ್ರಿಮಹಿಮೆ, ಸಿದ್ಧಲಿಂಗೇಶ್ವರ ಪುರಾಣ, ಅಷ್ಟಾವರಣ ನಿರೂಪಣೆ, ನಿತ್ಯಾಚಾರವಿಧಿ, ಲಿಂಗಪೂಜಾವಿಧಿ, ಶಿವರಾಮಾಯಣ ಮುಂತಾದ ಶಿವ ಭಕ್ತಿಯ ಬೆಳಕನ್ನು ಬೀರುವ ಹಲವಾರು ಪುಸ್ತಕಗಳನ್ನು ರುಚಿಕಟ್ಟಾಗಿ ಬರೆದು ಪ್ರಕಟಪಡಿಸಿ ಈ ನಾಡಿನ ಸುಪ್ರಸಿದ್ಧ ಕನ್ನಡ ಸರಸ್ವತಿಯ ಆರಾಧಕರಲ್ಲಿ ಇವರು ಬೆಳಗತೊಡಗಿರುವುದು ಹೆಮ್ಮೆಯ ವಿಷಯ. ಇನ್ನೂ ಬೃಹತ್ಸಾಹಿತ್ಯಕ್ಕೆ ಸಲ್ಲುವ ಭಾವಪೂರ್ಣ ಕೃತಿ, ಕವನಗಳು ಶ್ರೀ ಶಾಸ್ತ್ರಿಗಳವರ ಪ್ರತಿಭೆಯಿಂದ ಹೊರಬರುವಂತೆ ಪಯೋಸಮುದ್ರ ವೀರಭದ್ರನು ಅನುಗ್ರಹಿಸಲೆಂದು ನಮ್ಮ ಹಾರೈಕೆ.

ಸಾವಿರದೇವರು
ಶ್ರೀ.ಷ.ಬ್ರ ಚೆನ್ನವೀರ ಶಿವಾಚಾರ್ಯ
ಮಹಾಸ್ವಾಮಿಗಳವರು ಚರಪಟ್ಟಾಧ್ಯಕ್ಷರು
ಸಂಸ್ಥಾನ ಬಿಚ್ಚಾಲೆ

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಶ್ರೀ ಮಲೆಯು ಶಾಂತೇಶ್ವರ ಗುರುಸಂಸ್ಥಾನ

ಬಸವ ಕಲ್ಯಾಣದ ಅಕ್ಕನಾಗಮ್ಮನ ತೋಟಿನಕಟ್ಟೆ ಮಣಿಖಚಿತ ರತ್ನ ಸಿಂಹಾಸನಕ್ಕೆ
ಕಾರಣ ಕರ್ತರಾದ ( ಉಭಯ ) ಎಲೆನಂದೂರು, ಕಟ್ಟಿಮನಿ ಹಿರೇಮಠದ
ಶ್ರೀ ಘನಲಿಂಗ ಚಕ್ರವರ್ತಿ ಗುರು ಚರಪಟ್ಟಾಧ್ಯಕ್ಷ ವೈದ್ಯ ಭೂಷಣ
ಶ್ರೀ ಷ ಬ್ರ, ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ

## ಶುಭ ಸಂದೇಶ

ಸಾಮಾನ್ಯ ಜನಾಂಗದಲ್ಲಿ ಭಕ್ತಿ ಬೆಳಿಯಲೆಂಬ ಸಧುದ್ದೇಶದಿಂದ ಪುರಾಣಗಳನ್ನು ಬರೆಯುವ ಪದ್ಧತಿಯು ಪ್ರಾರಂಭವಾಯಿತು ಶ್ರೀ ವ್ಯಾಸಮಹರ್ಷಿಗಳ ೧೮ ಪುರಾಣಗಳನಂತರ ಅನೇಕ ಮಹಿಮಾಶಾಲಿಗಳ ಪುರಾಣಗಳು ಬರೆಯಲ್ಪಟ್ಟವು ಹರನಸಣೆಗಣ್ಣಿಂದ ಉದಯಿಸಿದ ವೀರ ಪ್ರತಾಪಶಾಲಿಯಾದ ಶ್ರೀ ವೀರಭದ್ರೇಶ್ವರ ಮಹಾಮಹಿಮಶಾಲಿಯು ಇವರ ಚರಿತ್ರೆಯು ಬೇರೆ ಬೇರೆ ಪುರಾಣಗಳಲ್ಲಿ ಬರುತ್ತಲಿದೆ. ಇವರ ಸಂಪೂರ್ಣ ಚರಿತ್ರೆಯನ್ನು ಪ್ರತಿಪಾದಿಸುವ ಸ್ವತಂತ್ರ ಗ್ರಂಥವಿರಲಿಲ್ಲ ಈ ರೀತಿಯ ಗ್ರಂಥದ ಅವಶ್ಯಕತೆಯನ್ನು ಕಂಡು ನಾವು ವೇ॥ ಪಂ॥ ಜೋತಿರ್ವಿದ್ವಾನ್ ಕವಿ ಭೂಷಣ ಶ್ರೀ ಚೆನ್ನಬಸವಶಾಸ್ತ್ರಿಗಳು ಚಾಗಿಹಿರೇಮಠ ರಾಯಚೂರು ಇವರಿಗೆ ಶ್ರೀ ವೀರಭದ್ರೇಶ್ವರ ಪುರಾಣ ರಚನೆಮಾಡಿರೆಂದು ಅಪ್ಪಣೆ ಕೊಡಿಸಿದೆವು ಆ ಪ್ರೇಣೆರಗೆ ಮಹತ್ವಕೊಟ್ಟು ಶ್ರೀ ಶಾಸ್ತ್ರಿಗಳವರು ಈ ಪುರಾಣವನ್ನು ಐತಿಹಾಸಿಕ ದೃಷ್ಟಿಯಿಂದ ಪರಾಂಬರಿಸಿ ರಚಿಸಿದ್ದಾರೆ. ಶ್ರೀ ವೀರಭದ್ರೇಶ್ವರನ ಅನೇಕ ಪವಾಡಗಳನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಪುರಾಣದ ಭಾಷೆಯು ಸರಳವು ಸುಬೋಧಕರವು ಆಗಿದೆ: ಇದೇ ರೀತಿಯ ಅನೇಕ ಪುರಾಣಗಳು ಶ್ರೀ ಶಾಸ್ತ್ರಿಗಳವರಿಂದ ನಿರ್ಮಾಣವಾಗಿ ಜಗತ್ತಿನಲ್ಲಿ ಬಾಳಿ ಬೆಳಗಲೆಂದು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇವೆ.

ಶಿವಂಭೂಯಾತ್
ಶುಭಂ—ಭದ್ರಂ

ದಿನಾಂಕ
೨೫-೭-೧೯೭೨

ಮುಕ್ಕಾಂ ನಂದೂರ
ಜಿಲ್ಲಾ ಕಲಬುರ್ಗಿ

## — ಶ್ರೀ ವೀರಭದ್ರೇಶ್ವರ ಪುರಾಣದ ಬಗ್ಗೆ ಅಭಿಪ್ರಾಯವು —

ನನ್ನ ಸ್ನೇಹಿತರಾದ ರಾಯಚೂರು ಜಾಗಿ ಹಿರೇಮಠದ ಚನ್ನಬಸವ ಕವಿಗಳು ಬರೆದ ವೀರಭದ್ರೇಶ್ವರ ಪುರಾಣವನ್ನು ಆದ್ಯಂತವಾಗಿ ಓದಿನೋಡಿದೆನು. ಕವಿತಾಸರಣಿಯು ಸರಸವಾಗಿದ್ದು ಲಾಲಿತ್ಯ ಮನೋಹರಗಳಿಂದ ಕೂಡಿರುತ್ತದೆ. ಶ್ರೀ ಚನ್ನಬಸವಶಾಸ್ತ್ರಿಗಳು, ಈ ಪುರಾಣದಲ್ಲಿ ವೀರರಸ ಪ್ರಾಧಾನ್ಯವಾಗಿ ಉಳಿದ ರಸಗಳನ್ನು ಕೂಡ ಅಲ್ಲಲ್ಲಿ ವಿವರಿಸಿದ್ದಾರೆ. ವೀರಭದ್ರನ ಕಥೆಯು ಯಾವಾಗಲೂ ರೋಮಾಂಚಕಾರಕವಾದುದು. ಇದರಲ್ಲಿ ಹರಿ, ಹರ, ಬ್ರಹ್ಮರೆಲ್ಲರೂ ಪಾಲುಗಾರರಾಗಿರುವುದರಿಂದ ಜಯಶಾಲಿಯಾದ ವೀರಭದ್ರನಿಗೆ ಹೆಚ್ಚಿನ ಗೌರವ ಬರುವುದು ಸ್ವಾಭಾವಿಕವಾದುದಾಗಿರುತ್ತದೆ.

ಈ ಕಾಲದಲ್ಲಿ ಪುರಾಣಗಳನ್ನು ಓದುವುದರಲ್ಲಿ ಜನರ ವಿಶ್ವಾಸವು ದಿನೇ ದಿನೇ ಕಡಿಮೆಯಾಗುತ್ತ ಬಂದಿದ್ದರೂ ವೀರಭದ್ರೇಶ್ವರರ ಕಥೆಯು ಸತ್ಯವಾದುದೂ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾಗಿರುವುದರಿಂದ ಕವಿಯ ಕಲ್ಪನೆಗೆ ಅವಕಾಶವೇ ಇರುವುದಿಲ್ಲ. ನೈಸರ್ಗಿಕವಾಗಿ ಶ್ರೀ ಚನ್ನಬಸವಶಾಸ್ತ್ರಿಗಳು ರಚಿಸಿರುವುದು ಶ್ಲಾಘನೀಯವಾಗಿರುತ್ತದೆ. ಇವರು ವಿನಯಶೀಲರೂ ಸದ್ಗುಣ ಮಂಡಿತರೂ ಆಗಿರುವುದರಿಂದ ಇವರ ಕೃತಿಗೆ ಮತ್ತಷ್ಟು ಬೆಲೆ ಬರುತ್ತದೆ.

ಇಂತಹ ಅನೇಕ ಕೃತಿಗಳನ್ನು ಇವರು ರಚಿಸಬೇಕೆಂದು ಆಶಿಸುತ್ತೇನೆ. ಅಲ್ಲಲ್ಲಿ ಕೆಲವು ಶಬ್ದದೋಷಗಳಿರುತ್ತವೆ. ಮುಂದಿನ ಮುದ್ರಣದಲ್ಲಿ ಸರಿಪಡಿಸಬೇಕೆಂದು ಸೂಚಿಸುತ್ತೇನೆ. ಈಗಿನಕಾಲದಲ್ಲಿ ಪುರಾಣಕ್ಕಿಂತಲೂ, ವೀರಭದ್ರೇಶ್ವರನ ಚರಿತ್ರೆಯನ್ನು ಚಂಪೂರೂಪದಲ್ಲಿ ರಚಿಸಿದ್ದರೆ ಕನ್ನಡ ಸಾಹಿತ್ಯಕ್ಕೆ ಉಪಕಾರವಾಗುತ್ತಿತ್ತು. ಅನೇಕಜನ ವೀರಶೈವ ಪಂಡಿತಕವಿಗಳು ಪುರಾಣಗಳನ್ನೇ ಹೆಚ್ಚಾಗಿ ಬರೆಯುತ್ತಾರೆ. ಅದನ್ನೇ ಚಾರಿತ್ರಿಕವಾಗಿ ಕಾವ್ಯಗಳನ್ನು ಬರೆದರೆ ಅವರ ಹೆಸರು ಕನ್ನಡ ಸಾಹಿತ್ಯದಲ್ಲಿ ಅಜರಾಮರವಾಗುವುದು. ಅತ್ತಕಡೆಗೆ ವೀರಶೈವ ಪಂಡಿತರು ಅವಶ್ಯ ಲಕ್ಷ್ಯಕೊಡಬೇಕೆಂದು ಸೂಚಿಸಿ ನನಗೆ ಅಭಿಪ್ರಾಯ ಬರೆಯಲಿಕ್ಕೆ ಅವಕಾಶ ಮಾಡಿಕೊಟ್ಟುದುದಕ್ಕೆ ಪುರಾಣಕರ್ತೃಗಳಾದ ಶ್ರೀ ಚನ್ನಬಸವ ಕವಿಗಳಿಗೆ ತುಂಬಾ ಕೃತಜ್ಞನಾಗಿರುತ್ತೇನೆ.

**ಯಾದಗಿರಿ**

ಜಿಲ್ಲೆ: ಗುಲ್ಬರ್ಗಾ.

ವ್ಯಾಕರಣತೀರ್ಥ, ವಿದ್ಯಾಲಂಕಾರ, ವಿದ್ಯಾವಾರಿಧಿ
**ಚಂದ್ರಶೇಖರ ಶಾಸ್ತ್ರಿ**
ಹಿರಿಯಮಠ ಹೊಳಲು [ಬಳ್ಳಾರಿ].

...( ಶ್ರೀ ವೀರಭದ್ರೇಶ್ವರಃ ಪ್ರಸನ್ನಃ )...

# ಆತ್ಮನಿವೇದನೆ

ಶ್ರೀ ವೀರಭದ್ರದೇವರ ಪವಾಡಗಳನ್ನು ತಿಳಿಯ ಪಡಿಸುವ ಮಹಾಕವೀಶ್ವರರಿಂದ ಪ್ರಣೀತಗಳಾದ ಪುರಾಣಗಳನೇಕವಿದ್ದರೂ ಕೆಲವು ಪುರಾಣಗಳಲ್ಲಿ ವಿಸ್ತಾರವಾದ ವರ್ಣನೆಗಳೂ ಅನೇಕ ಬೇರೆ ಬೇರೆ ಚರಿತ್ರಗಳೂ ಇದ್ದು ಕೆಲವುಗಳಲ್ಲಿ ದಕ್ಷಾಧ್ವರಧ್ವಂಸವೇ ಮಾತ್ರ ಇದ್ದು. ಶುಲಭವಾಗಿ ಜನರಿಗೆ ಸರ್ವಮಹಿಮೆಗಳನ್ನು ಪ್ರವಚನಾರೂಪದಲ್ಲಿ ಬೋಧಿಸಲಿಕ್ಕೆ ಬಾರದಾಗಿರುವುದರಿಂದ ಉಭಯನಂದೂರು ತೋಪಕಟ್ಟೀಮನಿ ಪಟ್ಟಾಧ್ಯಕ್ಷ ಶ್ರೀ ಷ. ಬ್ರ. ಸದಾಶಿವಶಿವಾಚಾರ್ಯ ಮಹಾಸ್ವಾಮಿಗಳವರು ಸಂಕ್ಷಿಪ್ತರೂಪದಲ್ಲಿ ಪುರಾಣವನ್ನು ಪ್ರವಚನಾನುಕೂಲವಾಗುವಂತೆ ರಚಿಸಲು ನನ್ನಗೆ ಅಪ್ಪಣೆಕೊಡಿಸಿದ್ದರಿಂದ ನಾನು

| | |
|---|---|
| ವ್ಯಾಸಮಹರ್ಷಿ ಕೃತ | ಸ್ಕಾಂದಪುರಾಣ, ಪದ್ಮಪುರಾಣ ಶಿವರಹಸ್ಯಾದಿಗಳನ್ನು |
| ಗುಬ್ಬಿಮಲ್ಲಣಾರ್ಯವಿರಚಿತ | ಶ್ರೀ ವೀರಶೈವಾಮೃತ ಮಹಾಪುರಾಣವನ್ನು |
| ವಿರೂಪಾಕ್ಷ ಪಂಡಿತ ಕೃತ | ಶ್ರೀ ಚೆನ್ನಬಸವೇಶ್ವರ ಪುರಾಣವನ್ನು |
| ಹರಿಹರ ಕೃತ | ಶ್ರೀ ವೀರಭದ್ರದೇವರ ರಗಳೆಯನ್ನು |
| ರಾಘವಾಂಕ ಕೃತ | ಶ್ರೀ ವೀರೇಶಚರಿತೆಯನ್ನು ( ಮೀಸಲಕವಿತೆ ) |
| ವೀರಭದ್ರ ನೃಪಾಲರಚಿತ | ಶ್ರೀ ವೀರಭದ್ರ ವಿಜಯವನ್ನು |
| ಶಂಕರಕವಿ ಕೃತ | ಶ್ರೀ ಚೋರಬಸವ ಪುರಾಣವನ್ನು |
| ಅಮರಕವಿ ಕೃತ | ಶ್ರೀ ಬನದೇಶ್ವರ ಪುರಾಣವನ್ನು |
| ಗಳಗನಾಥ ನೊರೆವ | ಶೈವಸುಧಾರ್ಣವ ವಚನಗ್ರಂಥವನ್ನು |

ಪರಿಶೀಲಿಸಿ ೪೧೨ ಪದಗಳಿಂದ ಕೂಡಿದ ೫ ಸಂಧಿಗಳುಳ್ಳ ಪುರಾಣವನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿದ್ದೇನೆ. ಇದನ್ನು ವಿರಚಿಸುವಯೋಗ್ಯತೆ ನನ್ನಲ್ಲಿಲ್ಲದಿದ್ದರೂ ಇದು ಗುರು ಹಿರಿಯರ ಕೃಪೆಯಿಂದಲೂ ಶಿವಾನುಗ್ರಹದಿಂದಲೂ ನೆರವೇರಿದೆ. ಈ ಮಹಾಕಾರ್ಯಕ್ಕೆ ಶ್ರೀ ಷ. ಬ್ರ ಸಾವಿರದೇವರು ಚೆನ್ನವೀರಶಿವಾಚಾರ್ಯ ಮಹಾಸ್ವಾಮಿಗಳವರು ಸಂಸ್ಥಾನ ಬಿಚ್ಚಾಲೆ ಚರಪಟ್ಟಾಧ್ಯಕ್ಷರು ತಮ್ಮ ಅಮೃತವಾಣಿಯಿಂದ ಪ್ರೋತ್ಸಾಹಿಸಿದುದೇ ಕಾರಣವು ಹಾಗೂ ಶ್ರೀಗಳವರು ನನ್ನ ವಿಜ್ಞಾಪನೆಯನ್ನು ಮನ್ನಿಸಿ ಕೃಪೆಗೈದು ಮುನ್ನುಡಿಯನ್ನು ಬರೆದುಕೊಟ್ಟು ಗ್ರಂಥಕ್ಕೆ ಶೋಭೆಯನ್ನುಂಟುಮಾಡಿದ್ದಾರೆ. ಮತ್ತು ಶ್ರೀ ಷ. ಬ್ರ. ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳವರು ಚೌದಾಪುರಿ ಹಿರೇಮಠ ಗುಲ್ಬರ್ಗಾ ಶ್ರೀ ಷ. ಬ್ರ.

ಮಳೀಂದ್ರ ದೇವರು ಮುಗುಳುನಾಗಾವಿ ಕಟ್ಟಿಮನಿ ಹಿರೇಮಠ ಪಾಳ್ಯ ಈ ಉಭಯ ಸ್ವಾಮಿಗಳವರ ಪ್ರೇಮಾದರಥ ಪುರಸ್ಕಾರವೂ ಗ್ರಂಥ ರತ್ನವು ತೀವ್ರ ಪ್ರಕಾಶವಾಗ ಲೆಂಬ ಲವಲವಿಕೆಯೂ ನನ್ನಗೆ ಅತ್ಯಂತ ಸಂತೋಷವನ್ನುಂಟು ಮಾಡಿದ್ದರಿಂದ ರಚನಾ ಕಾರ್ಯವು ಅತಿಸುಗಮವಾಗಿ ತೀವ್ರವೇ ಕೊನೆಗೊಂಡಿತು. ಮುದ್ರಣ ಸಮಯದಲ್ಲಿ ಶ್ರೀ ವೇ. ಪಂ. ಚೆನ್ನಬಸವಶಾಸ್ತ್ರಿಗಳು ಬೇಗವಾಟ ಹಿರೇಮಠ ಶ್ರೀ ವೇ. ಮುಂಡರಗಿ ಮಠದ ಗಾಯನ ಕೋಕಿಲ ಮಹಾಂತಯ್ಯ ಗವಾಯಿಗಳು ಕವಿತಾಳ ಶ್ರೀಮಾನ್ ಶಾಸ್ತ್ರಿ ಮಲ್ಲನಗೌಡರು ವಳಬಳ್ಳಾರಿ. ಈ ಮೂವರು ಮಹಾ ಶಯರು ಪ್ರೂಫ್‌ಕರೆಕ್ಷ್ನ ಮಾಡುವುದರಲ್ಲಿ ನನ್ನಗೆ ಅತ್ಯಂತ ಸಹಾಯಗೈದಿದ್ದಾರೆ ಕೆಲವು ಮಹಾಶಯರು ಮುದ್ರಣ ಕಾರ್ಯಕ್ಕಾಗಿ ಧನ ಸಹಾಯವನ್ನು ಮಾಡಿ ಸಪ್ತ ಸಂತಾನಗಳಲ್ಲಿ ಒಂದು ಸಂತಾನವಾದ ಸದ್ಗ್ರಂಥವನ್ನು ಪ್ರಕಾಶಕ್ಕೆ ಬರುವಂತೆಮಾಡಿ ಪುಣ್ಯಭಾಗಿಗಳಾಗಿದ್ದಾರೆ. ಅವರೆಲ್ಲರ ಹೆಸರುಗಳನ್ನು ನಮ್ಮ ಗ್ರಂಥಮಾಲೆಯ ವರದಿಯಲ್ಲಿ ಕೊಟ್ಟದ್ದೇವೆ. (ಇನ್ನು ನನ್ನಿಂದ ರಚಿತವಾದ ಅನಂತಗ್ರಂಥಗಳಿವೆ ಅವುಗಳೆಲ್ಲವು ಧನಿಕ ಮಹಾಶಯರ ಸಹಾಯದಿಂದಲೆ ಹೊರಬೀಳಬೇಕಾಗಿದೆ). ಮತ್ತು ಸಕಾಲಕ್ಕೆ ತಮ್ಮ ಶ್ರಮವನ್ನು ಲಕ್ಷಿಸದೆ ಶುದ್ಧವಾಗಿಯೂ ಅಂದವಾಗಿಯೂ ಬಂಧುರವಾಗಿಯೂ ಸರ್ವರಹಸ್ತದಲ್ಲಿ ಪ್ರಶಸ್ತವಾಗಿ ಶೋಭಿಸುವಂತೆ ಕಂಪೋಜು, ಮುದ್ರಣ, ಬೈಂಡನ್ನು, ನಮ್ಮ ಪ್ರೆಸ್ಸಿನ ಕೆಲಸಗಾರರು ಮಾಡಿದ್ದಾರೆ. ಇನ್ನು ಕೆಲ ವುಪಂಡಿತರು ಸಲಹೆಗಳನ್ನು ಕೊಟ್ಟು ಸಹಾಯ ಗೈದಿದ್ದಾರೆ. ಈ ಪ್ರಕಾರ ಸಹಾಯ ಮಾಡಿದ ಸರ್ವರಿಗೂ ಶ್ರೀ ವೀರಭದ್ರೇಶ್ವರನು ಸರ್ವ ಕಾರ್ಯಗಳಲ್ಲಿ ಜಯವನ್ನು ಶ್ರೀ ಪರಶಿವನು ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ

ಪಂ|| ಚಾಗಿ ಹಿರೇಮಠದ ಚೆನ್ನಬಸವಕವಿ

ಶುಭೋದಯ ಪಂಚಾಂಗ ಕರ್ತ

ರಾಯಚೂರು.

ಶ್ರೀ ವೀರಭದ್ರೇಶ್ವರಃ ಪ್ರಸನ್ನಃ

# ಶ್ರೀ ವೀರಭದ್ರೇಶ್ವರ ಪುರಾಣ





## ಪೀಠಿಕಾ ಸಂಧಿ

ಭಾಮಿನೀ ಷಟ್ಪದಿ

ಶ್ರೀಮಹಾ ಗುರುದೇವನಿಮ್ಮಯ ।
ರಾಮಣೀಯಕ ಪಾದಪಂಕಜ ।
ಸೇಮದಿಂದಲಿ ಸತತನುತಿಸುವ ಮತಿಯನೆನಗಿತ್ತು ॥
ಪ್ರೇಮದಿಂ ಪಾಲಿಪುದು ನಂಬಿದೆ ।
ಸೋಮಧರ ನಪರಾವತಾರನೆ ।
ಕಾಮಿತಾರ್ಥದ ಭವಮಹಾಂಬುಧಿಜೈತ್ರ ಸುಚರಿತ್ರ ॥ ೧ ॥

ಶ್ರೀಶವಿಧಿಸುರಪಾಲವರ ಯ ।
ಕ್ಷೇಶಮುಖ ಸುರನಿಚಯವಂದಿತ ।
ಪಾಶನಾಶಮಹೇಶ ರವಿಶಶಿಯಾಶ್ರಯಶನಾಕ್ಷ ॥
ಕೇಶವಾದಿ ಸುರೇಷ್ಟದಾಯಕ ।
ಕ್ಲೇಶದೋಷ ಗಳಸ್ನುತರಿಯುತು ।
ಮೋಶ ಕರುಣಿಪುದೆನ್ನ ಕೃತಿಗತಿಶಯದ ಸಂಪದವ ॥ ೨ ॥

ಸರ್ವಮಂಗಳೆ ತವಪದಂಗಳ ।
ಸರ್ವಕಾಲದಿ ಭಜಿಪಭಕ್ತರ ।
ಸರ್ವದೋಷಗಳನ್ನು ಪರಿಹರಗೈದು ಪಾಲಿಸುವ ॥
ಸರ್ವಶಕ್ತಳು ಎಂಬ ಕಾರಣ ।
ಸರ್ವಕಾಲದಿ ನಿನ್ನನುತಿಸುವೆ ।
ಸರ್ವಸಂಪದವಿತ್ತು ಪಾಲಿಸು ಶರ್ವನರ್ಧಾಂಗಿ ॥ ೩ ॥

ವಿಘ್ನ ವಾರಿಧಿ ಕುಂಭಸಂಭವ ।
ವಿಘ್ನ ಕಾನನ ಹವ್ಯವಾಹನ ।
ವಿಘ್ನತಮಭಾಸ್ಕರನೆ ಯನ್ನಯ ಕೃತಿಗೆ ಸಂತತವು ॥
ವಿಘ್ನಭಯಬಾರದೊಲು ವರನಿ ।
ರ್ವಿಘ್ನವನು ಪಾಲಿಸುತ ಪೊರೆಯೈ ।
ವಿಘ ರಾಜನೆ ಪ್ರಥಮಪೂಜ್ಯನೆ ಪಾರ್ವತೀ ತನಯ ॥ ೪ ॥

ವೀರ ವೀರೇಶ್ವರನೆ ನಿಮ್ಮಯ ।
ಪಾರ ಶೌರ್ಯೋತ್ಸಾಹ ಧೈರ್ಯಗ ।
ಳಾರು ಬಣ್ಣಿಸಲಾರ್ಪರೈ ಯುದ್ಧಂಡ ದಕ್ಷಹರ ॥
ನಾರಸಿಂಹಾಂತಕನೆ ನಂಬಿದ ।
ಮಾರುತಿಗೆ ನೀನಿಷ್ಟಲಿಂಗವ ।
ಭೂರಿ ದಯದಿಂದಿತ್ತ ಸುಹಿಮನೆ ಪಾಲಿಸೈಮುದದಿ ॥ ೫ ॥

ನಿನ್ನಯನುಪಮ ಚರಿತೆಯನು ಸಂ ।
ಪನ್ನ ರಹುದೆನ್ನುವೊಲು ದಯದಿಂ ।
ವೆನ್ನಹೃದಯಾಬ್ಜದಲಿ ನೀನೆಲಸಿರ್ದು ಹರುಷದಲಿ ॥
ಚೆನ್ನೆಸೆವ ಮೃದುಮಧುರ ವಾಕ್ಯಗ ।
ಳನ್ನು ನವರಸ ಭಾವಲಕ್ಷಣ ।
ವಿನ್ನು ಚಿತ್ರಾರ್ಥಗಳ ನುಡಿಯಿಸು ವೀರಭದ್ರೇಶ ॥ ೬ ॥

ಪರಶಿವನ ಸದ್ಧರ್ಮವೇ ಯೀ ।
ಧರಣಿಯೊಳ ಗವತರಿಸಿ ತಾನಾ ।
ಪರಗೆ ವಾಹನವಾಗಿ ಮತ್ತಾಶಿವನ ತಪದೊಲಿಸಿ ॥
ನಿರುತ ಛಕುತಿಯೊ ಳುಗ್ರತಪ ವಾ ।
ಚರಿಸಿ ಮೆರೆದ ಶಿಲಾದಮುನಿಗೆಯು ।
ತರುಳ ನೆನಿಸುವನಾದಿ ವೃಷಭೇಶ್ವರನಿ ಗೊಂದಿಸುವೆ ॥ ೭ ॥

ಆದಿಯೊಳು ನಂದೀಶನೆನಿಸುತ ।
ನಾದಿಯೊಳು ವೃಷಭೇಶನೆನಿಸುತ ।
ಭೇದವಿಲ್ಲದ ಲೊಂದೆಯಾದರು ಭೇದತೋರುತಲಿ ॥
ಸಾದರದೆ ಪರಶಿವಗೆ ವಾಹನ ।
ವಾದ ನಂದೀಶ್ವರನೆ ಕರುಣಿಸು ।
ಮೋದದಲಿ ನೀಯೆನ್ನಯೀ ಕೃತಿಗತಿಶಯದ ಯಶವ ॥ ೮ ॥

ಪರಮ ಪರಶಿವ ನೋಲಗದಿ ತಾ ।
ನಿರುತ ಹರುಷದಿ ನಾಟ್ಯವಾಡುತ ।
ಲರರೆ ಸಂತೋಷವನು ಗೊಳಿಸುತ ಸರ್ವಪ್ರಮಥರನು ॥
ಕರವದೊಂದೇ ಮುಗಿಯು ತಭವಗೆ ।
ಗಿರಿಜೆ ಕೋಪಿಸೆ ಮೂರನೆಯ ಪದ ।
ಹರನಕರುಣದಿ ಪಡೆದ ಭೃಂಗೀಶ್ವರನಿಗೆರಗುವೆನು ॥ ೯ ॥

ಅಸುರಹರ ಮೊದಲಾದ ದಿವಿಜರ ।
ವಿಸರವನು ಗೆಲ್ದವರ ಪುರಗಳ ।
ಕಸಿದು ವಿಪಿನಕೆಳಳುಹಿ ಮೂಜಗ ಗಳನು ಬಾಧಿಸಿದ ॥
ಅಸಮ ಸಾಹಸ ತಾರಕನಶಿರ ।
ಕುಸುರಿದರಿದತಿ ವೀರನೆನಿಸುವ ।
ಜಸದಿಶೋಭಿಪ ಕಾರ್ತಿಕೇಯನಿ ಗೊಂದಿಸುವೆ ಮುದದಿ ॥ ೧೦ ॥

ನುತಿಪೆರೇಣುಕ ದಾರುಕರ ನಾ ।
ನುತಿಪೆ ನೇಕೋರಾಮ ಗುರುಗಳ ।
ನುತಿಪೆ ಹರುಷದಿ ಪಂಡಿತಾರಾಧ್ಯರನು ಭಕುತಿಯಲಿ ॥
ನುತಿಪೆ ವಿಶ್ವಾರಾಧ್ಯರಡಿಗಳ ।
ನುತಿಪೆ ನೀಗುರು ಸಾರ್ವಭೌಮರ ।
ನುತಿಸಿ ರಚಿಸುವೆ ನೀಕೃತಿಯ ನಾ ನತುಲಸಂತಸದಿ ॥ ೧೧ ॥

ಪೆಸರ ದೊಂದೊಂದುಸುರ ಲೆನ್ನಯ ।
ರಸನೆ ಗಳವಲ್ಲದು ನಿಮಿತ್ಯದಿ ।
ಕುಸುಮಗಳ ಸಂಗ್ರಹಿಸು ತೊಂದೇ ಸರವ ಗೈದವೊಲು ॥
ರಸೆಯೊಳಗೆ ಪೆಸರಾಂತು ಶೋಭಿಸು ।
ವಸಮ ರೆನಿಸುವ ಶಿವ ಕವೀಶರ ।
ವಿಸರವನು ಬಲಗೊಂಡು ನಾನೀ ಕೃತಿಯ ನುಸುರುವೆನು ॥ ೧೨ ॥

ಮುನ್ನ ಪರತರ ಶಿವಕವೀಶರು ।
ರನ್ನವಶಿರೊಳುಶಿವನ ಮಹಿಮೆ ಗ ।
ಳನ್ನುಪೇಳಿದ ಪಥವ ಪಿಡಿದೇನಡೆಯುವೆನು ನಾನು ॥
ಮನ್ನಿಸದೆ ದೂಷಿಸರು ಸುಮನಸ ।
ರೆನ್ನ ವತಿಶಯ ತೋಷ ದಿಂದಲಿ ।
ಚೆನ್ನ ಶ್ರೀವೀರೇಶ ನುರುತರ ಮಹಿಮೆಗಳ ಮುದದಿ ॥ ೧೩ ॥

ಕೃತಿ ಯಿದುವೆ ವೀರೇಶ ಮಹಿಮೆಯು ।
ಕೃತಿ ಪತಿಯು ಪಂಪಾಮಹೇಶನ ।
ಸುತನು ಉದ್ಧನ ವೀರಭದ್ರೇಶ್ವರನು ಎಂಬುದರಿಂ ॥
ಕೃತಿಯ ಕೇಳ್ವುದು ಭಕ್ತಿಭಾವದಿ ।
ಮತಿಯುತರು ಸಲೆ ಶಾಂತಚಿತ್ತದಿ ।
ಕೃತಿಯೊಳಗೆ ದೋಷಗಳನೆಣಿಸದೆ ಸರ್ವಕಾಲದಲಿ ॥ ೧೪ ॥

ಉಭಯ ಸಂಡೂರೇಶ ನೆನಿಸುತ ।
ಲಭವಸಮ ಮಹಿಮೆಯೊಳು ಮೆರೆಯುವ ।
ಪ್ರಭುವರಾಗ್ರಣಿನುತ ಸದಾಶಿವ ಸ್ವಾಮಿಗಳುದಯದಿ ॥
ಶುಭದಿನದೆ ರಾಯ್ಚೂರು ಕಿಲ್ಲೆಯ ।
ಪ್ರಭುಗಳಧಿಕರ ಸಮಯದಲಿ ಬಹು ।
ವಿಭವದಿಂದಲಿ ಕರೆದು ಪೇಳಿದ ರೆನ್ನಗತಿಮುದದಿ ॥ ೧೫ ॥

ಚೆನ್ನಬಸವ ಸುಕವಿಯೆ ಬಾರೈ ।
ಉನ್ನತದ ವೀರೇಶ ಮಹಿಮೆ ಗ ।
ಳನ್ನು ರಚಿಸುವುದೆಲ್ಲ ಲೀಲೆಗಳನ್ನು ವಿಸ್ತರಿಸಿ ॥
ರನ್ನ ರನ್ನಗ ಳನ್ನು ಸೇರಿಸಿ ।
ಚೆನ್ನಸೆವ ಸರ ಗೈದವೊಲುಕೇ ।
ಳಿನ್ನು ಬುಧಜನ ರೊಪ್ಪುವೊಲು ನೀನೆಂದುಪೇಳಲ್ಕೆ ॥ ೧೬ ॥

ಶಿರದೊಳಗೆ ನಾ ನಾಂತನುಜ್ಞೆಯ ।
ಹರುಷರಸ ವಿಮ್ಮಡಿಸ ಲೆನ್ನಯ ।
ಪರಮ ಗುರುವರ ನಂಘ್ರಿಕಮಲಗಳನ್ನು ಹೃದಯದಲಿ ॥
ಸ್ಥಿರಗೊಳಿಸಿ ಪೇಳಿದೆನು ಕೇಳ್ವುದು ।
ಪರಮರಸಿಕರು ತಮ್ಮಯನುಪಮ ।
ತರುಳ ನುಸುರುವ ಬಾಲಭಾಷೆಯ ತೆರದಿನೋದದಲಿ ॥ ೧೭ ॥

ಚರಿತ್ರೆಯಿದನತಿಹರುಷದಿಂದಲಿ ।
ಒರೆದಚಾಗಿಯ ಮಠದ ಸನ್ನುತ ।
ಪರಮ ಪಂಪಾರಾಧ್ಯ ರುದ್ರಾಂಬೆಯರ ತನುಜಾತ ॥
ನಿರುತ ಗುರುಚರಲಿಂಗ ಪೂಜಕ ।
ಸರಸ ಪಂಡಿತ ಚೆನ್ನಬಸವನು ।
ಹರುಷದಿಂದಿಧ ನಾಲಿಪುದು ಸಹೃದಯರಾದರದಿ ॥ ೧೮ ॥

ಕೃತಿಯು ಪದಿನೆಂಟಂಗಗಳು ಯಿಾ ।
ಕೃತಿಯೊಳಿಲ್ಲವದದು ನಿಮಿತ್ಯದಿ ।
ಕೃತಿಯಿದುವೆ ಸಸ್ಕೃತಿಯದೆನಿಸದು ಯನ್ನದೆಂಪೆ ಬುಧರು ॥
ಕೃತಿಯನೋಳ್ಪುದು ಶಿವನಮಹಿಮಾ ।
ಮೃತದ ಸವಿಹೊನಲೆನುತ ಸಂತತ ।
ಮತಿಯುತರು ಸಲೆಶಾಂತಚಿತ್ತದಿ ಪರಮಕರುಣದಲಿ ॥ ೯ ॥

ಭವನ ಸದ್ಯೋಜಾತ ಮುಖಸಂ
ಭವನೆ ನಿನ್ನನು ನಂಬಿದವರಘ ।
ನಿವಹ ಪರಿಹರ ದುಷ್ಟಶಿಕ್ಷಕ ಶಿಷ್ಟರಕ್ಷಕನೆ ॥
ಕವಿವ ಮಾಯಾ ಮೋಹಭೇದನ ।
ಭುವನ ಪಾವನ ರೇಣುಕೇಶ್ವರ ।
ಸವೆಯದಿಹ ಸಂಪದವ ನೀವುದು ಸುಜನಸಂತತಿಗೆ ॥ ೧೦ ॥

ವೀರಭದ್ರೇಶ್ವರನ ಮಹಿಮೆಯ ।
ಭೂರಿ ಭಕುತಿಯಲಿಂಧ ಸಂತತ ।
ವಾರು ಪೂಜಿಸುತಿಹರೊ ಪಠಿಸುತಲಿಹರೊ ಪೇಳುವರೊ ॥
ಸಾರಿ ಕೇಳುವರೆಲ್ಲರಿಗೆ ಮನ ।
ವಾರಭೀಷ್ಟವನಿತ್ತು ಪಾಲಿಪ ।
ಮಾರಮಣ ವಿಧಿ ಸುರಪ ಯಕ್ಷೇಶಾದಿ ವಿನುತಶಿವ ॥ ೧೧ ॥

ಪೀಠಿಕಾ ಸಂಧಿ ಸಂಪೂರ್ಣಂ

ಅಂತು ಸಂಧಿ ೧ ಕ್ಕಂ ಪದನು ೨೧ ಕ್ಕಂ

ಮಂಗಳ ಮಸ್ತು

ಶ್ರೀ ವೀರಭದ್ರೇಶ್ವರಃ ಪ್ರಸನ್ನಃ

# ಶ್ರೀ ವೀರಭದ್ರೇಶ್ವರ ಪುರಾಣ





## ಎರಡನೆಯ ಸಂಧಿ

* ಭಾಮಿನೀ ಷಟ್ಪದಿ *

ಪಾಪಿದಕ್ಷನು ಯಜ್ಞವನುತಾ ।
ನಾಪಿನಾಕಿಯನುಳಿದು ನಡೆಯಿಸೆ ।
ಕೋಪದಿಂದಲಿ ಶಪಿಸಿತೆರಳಿದ ನಾದಧೀಚಿಮುನಿ ॥

ಮರುಳ ದಕ್ಷನು ಸಕಲ ದಿವಿಜರ ।
ನೆರವಿನಲಿ ಹರ ರಹಿತಯಾಗವ ।
ನಿರವೆಗೈಯಲು ಶಿವನ ರೌದ್ರದೊಳುದಿಸಿ ಕೋಪದ ॥
ಭರದೊಳವರೆಲ್ಲರನು ಭಂಗಿಸಿ ।
ತರಿದು ದಕ್ಷನಶಿರವ ನುತಿಸಲು ।
ಕುರಿದಲೆಯ ಪಾಲಿಸಿದ ವೀರೇಶ್ವರನೆ ರಕ್ಷಿಪುದು ॥ ೧ ॥

ಘೋರದೈತ್ಯ ಹಿರಣ್ಯಕನಸಂ ।
ಹಾರಗೈದಾ ರಕುತಪೀರುತ ।
ಮೀರಿದುನ್ಮತ್ತದಲಿ ಮೂರೇಳ್ ಜಗವಬಾಧಿಸಿದ ॥
ನಾರಸಿಂಹನ ತರಿದು ಧರಣಿಗ ।
ಪಾರ ಹರುಷವ ಬೀರಿದಪ್ರತಿ ।
ವೀರವಿಕ್ರಮ ವೀರಭದ್ರೇಶ್ವರನೆ ಪಾಲಿಪುದು ॥ ೨ ॥

ಈ ಮಹಾಕೃತಿ ಗಾದಿಪೇಳಲಿ ।
ಕಾಮಹಾಕ್ಷೀರಾಬ್ಧಿ ಯಿರ್ಪುದು ।
ಭೂಮಿಯನು ತಾಬಳಸಿಯುತ್ತರದಿಶೆಯ ಭಾಗದಲಿ ॥
ರಾಮಣೀಯಕ ರತುನ ಮೌಕ್ತಿಕ ।
ಕಾಮಧೇನೂಚ್ಚೈಶ್ರವನುಪಮ ।
ಸೋಮ ಲಕುಮಿಯರಸ್ನು ಪಡೆದಿಹೆನೆನುತ ಘೋಷಿಸುತ ॥ ೩ ॥

ಆ ವಸಥಿ ಮಧ್ಯದೊಳ ಗಿರ್ಪುದು ।
ಭೂವನಿತೆ ಮಣಿಮಕುಟದಂದದಿ ।
ದೇವಕಿನ್ನರ ಸಿದ್ಧ ಸಾಧ್ಯರಯಕ್ಷ ಗುಹ್ಯಕರ ॥
ಹಾವಭಾವ ವಿಲಾಸದಪ್ಸರ ।
ರಾವಿಮಳ ಗಂಧರ್ವ ಗರುಡರ ।
ಪೂರ್ವದೇವಾದಿಗಳ ನಗರಗಳಿಂದ ಹೇಮಾದ್ರಿ ॥ ೪ ॥

ಅಷ್ಟದಿಕ್ಪಾಲಕರ ಪುರಗಳು ।
ಅಷ್ಟದಿಕ್ಕಿನೊ ಳೆಸೆಯುತಿರೆಪರ ।
ಮೇಷ್ಠಿಕೇಶವ ಶಿವನಲೋಕಗ ಳಂತರಂತರದಿ ॥
ಸೃಷ್ಟಿಗರಿದೆನ್ನುವ್ವೊಲು ನೋಳ್ಪರ ।
ದೃಷ್ಟಿಗರಿಯಪ ಕಾಂತಿಯಿಂದಲಿ ।
ಶ್ರೇಷ್ಠಮೆನೆ ಕಂಗೊಳಿಸುತಿರ್ದವು ಮೇರುಶೈಲದಲಿ ॥ ೫ ॥

ಎಲ್ಲ ಲೋಕಂಗಳಿಗೆ ಶಿಖರದೊ ।
ಲಲ್ಲಿ ಶೋಭೆಯುವೆತ್ತ ಗೌರೀ ।
ವಲ್ಲಭನ ಕೈಲಾಸದತಿಶಯ ವಣ್ಣಿಸಲ್ಕಳವೆ ॥
ಎಲ್ಲದಿವಿಜರು ಬಂದು ಶೇವಿಪ ।
ರೆಲ್ಲದನುಜರು ಬಂದು ಪೂಜಿಪ ।
ರೆಲ್ಲಮುನಿಗಳು ಬಂದು ನುತಿಸುತಲಿರ್ದರನುದಿನದಿ ॥ ೬ ॥

ನಂದಿಮುರ್ದಳೆಯನ್ನು ಬಾರಿಸೆ ।
ಚಂದದಿಂ ಭೃಂಗೀಶ ನರ್ತಿಸೆ ।
ಇಂದಿರೇಶನು ತಾಳವಿಡೆ ವಿಧಿಶ್ರುತಿಯಪೇಳುತಿರೆ ॥
ಚಂದದಿಂ ನಾರಂದ ತುಂಬುರ ।
ರಂದು ಗಾನವ ಪಾಡುತಿರೆಮುದ ।
ದಿಂದ ಕೈಗಳ ಮುಗಿದು ಜಯಜಯವೆನ್ನೆ ದಿಗಧಿಪರು ॥ ೭ ॥

ಕಿನ್ನರರು ಗಂಧರ್ವರಪ್ಸರ ।
ಪನ್ನಗರುಕಿಂಪುರುಷ ಗರುಡರು ।
ಸನ್ನುತಿಪ ವರಸಿದ್ಧಸಾಧ್ಯರು ಯಕ್ಷಗುಹ್ಯಕರು ॥
ಇನ್ನುಳಿದ ಸುರಸಮುದಯವು ತಾ ।
ವಿನ್ನುಕರಗಳ ಮುಗಿದು ಜಯಜಯ ।
ವೆನ್ನುತಿರೆ ಜಯಘೋಷತುಂಬಿರುತಿರ್ದುದಾಸ್ಥಾನ ॥ ೮ ॥

ಬಂದನಾ ಸಮಯದಲಿ ತವಕದ ।
ಲಿಂದಲಾ ದಕ್ಷಪ್ರಜೇಶ್ವರ ।
ನಂದನೆಯರೆಲ್ಲರ ಸುಸಂಪದಗಳನು ಕಾಣುತಲಿ ॥
ನಿಂದುನೋಡಿದ ನತುಲವೈಭವ ।
ದಿಂದಶೋಭಿಸುವಭವನೋಲಗ ।
ವಂದುತೂಗಿದಶಿರವ ಹರುಷಾಬ್ಧಿಯೊಳು ಮುಳುಗುತಲಿ ॥ ೯ ॥

ಏಸುಪುಣ್ಯವಗೈದೆನೋ ನಾ ।
ನೇಸುಧನ್ಯಳೊತನ್ನ ಪತ್ನಿಯು ।
ದೇಸು ಜನ್ಮದತಪದಫಲವೋ ಪಡೆದೆವೀಶಿವೆಯ ॥
ಏಸುಬಣ್ಣಿಸಿ ಫಲವದೇನಿ ।
ನ್ನಾಸುತೆಯರೀ ಸತೀದೇವಿಗೆ ।
ಸಾಸಟಿಯೆ ಸೌಂದರ್ಯಸಂಪದವಾಧಿಕಾರದಲಿ ॥ ೧೦ ॥

ಅಷ್ಟಮೂರುತಿಯಾಗಿ ಮೆರೆಯುವ ।
ಸೃಷ್ಟಿಸ್ಥಿತಿಲಯಗಳನು ಗೈಯ್ಯುವ ।
ದುಷ್ಟರನುಶಿಕ್ಷಿಸುತ ಪಾಲಿಪಶಿಷ್ಟಸಮುದಯವ ॥
ಶ್ರೇಷ್ಠ ನೀಪರಮೇಶಗೆನ್ನಯ ।
ಶಿಷ್ಟ ಸುತೆಯನು ಕೊಟ್ಟು ಬಹು ಸಂ ।
ತುಷ್ಟನಾದೆನು ಯೆನುತ ಮುಂದಡಿಯಿಡುತ ಮತ್ತೊಂದ ॥ ೧೧ ॥

ನಾಮದಲಿ ಶಿವನೆನಿಪ ಮಂಗಲ ।
ನಾಮದಲಿ ಶೋಭಿಸುವ ದಿವಿಜ ।
ಸ್ತೋಮದಲಿ ವರದೇವದೇವನು ಮಹಾದೇವನೆನಿಪ ॥
ಆ ಮಹಾಭವಲಯಗಳಿಲ್ಲದೆ ।
ತಾ ಮೆರೆವನಭವೆಂಬ ನಾಮದೊ ।
ಳೀಮಹಾತ್ಮನ ಮಹಿಮೆಯರಿಯದಲಿಹವು ಶೃತಿವಿತತಿ ॥ ೧೨ ॥

ದಕ್ಷನೆಂದೆನಿಪೆನ್ನನಾಮವ ।
ದೀಕ್ಷಿತಿಯದುಳ್ಳನ್ನ ಮೆರೆವುದು ।
ದಕ್ಷಸುತೆಯೆಂದೆನಿಪ ದಾಕ್ಷಾಯಣಿಯ ಪಡೆದುದರಿಂ ॥
ದಕ್ಷನಾನೀ ಜಗಕೆ ಯನ್ನಗೆ ।
ಲಕ್ಷವೇನೀ ಸುರಾಸುರ ರೆನು ।
ತೀಕ್ಷಿಸುತ ಮುಂದಡಿಯನಿಡುತಲಿ ಬಂದ ಗರ್ವದಲಿ ॥ ೧೩ ॥

ಮರೆದನೈ ಶಿವಶಿವೆಯರೀಜಗ ।
ದೆರೆಯರೆಂದೆಂಬುದನು ತನ್ನಯ ।
ಪಿರಿಯಳಿಯ ತನುಭವೆಯರದರಿಂ ಮನ್ನಿಸುತ ಕರೆದು ॥
ನೆರೆದಖಿಲ ಮನುಮುನಿ ಸುರಾಸುರ ।
ರರಿಯುವೊಲು ಗೌರವಿಪರೆನುತಲಿ ।
ಶಿರವಬಾಗದೆ ವಿನಯನಾಗದೆ ನಿಂದಗರ್ವದಲಿ ॥ ೧೪ ॥

ಮತ್ತತೆಯೊಳಿರುತಿರುವ ದಕ್ಷನ ।
ಚಿತ್ತಮುನ್ಮತ್ತತೆಯ ನರಿಯುತ ।
ಕೃತ್ತಿವಾಸನು ನೋಡದಿರ್ದನು ನುಡಿಪುದಿನ್ನೆಂತು ॥
ಚಿತ್ತದೊಳಗರಿಯುತ್ತಲುಮೆ ಕ ।
ಣ್ಣೆತ್ತಿ ನೋಡದಲಿರ್ದಳೈಸರ ।
ವೆತ್ತಿ ಪಾಡುತಲಿರ್ದರೆಲ್ಲರು ಶಿವನ ಮಹಿಮೆಗಳ ॥ ೧೫ ॥

ಬಂದೆಯಾ ದಕ್ಷಪ್ರಜೇಶ್ವರ ।
ನಿಂದೆಯಾ ನೀನಿಲ್ಲಿ ಬಾರೈ ।
ಎಂದು ಕರೆವವರಿಲ್ಲ ಮಾತಾಡಿಪರು ಮುನ್ನಿಲ್ಲ ॥
ಕಂದೆರಡು ತಾವ್ ನೋಡರೈ ಶಿವ ।
ಯೆಂದು ನುಡಿಯುವ ಬಗೆಯ ಕಾಣುತ ।
ಬೆಂಡುಬೇಗುದಿಗೊಂಡು ಕೋಪದೊಳುರಿದನಾ ದಕ್ಷ ॥ ೧೬ ॥

ಬುದ್ಧಿ ಪಲ್ಲಟವಾದುದಾಗಳೆ ।
ಬಿದ್ದನೈ ಘನಗರ್ವ ಕುಳಿಯಲಿ ।
ತಿದ್ದಲಾರ್ಗಳವಹುದು ವಿಧಿಬರಹವದು ಮಾನಸದಿ ॥
ಪೊದ್ದಿತೀತನ ಕೋಪರೌದ್ರದ ।
ಮುದ್ದೆಯುಂಡದೊಳಾಗಿ ಸಭೆಯೊಳ ।
ಗಿದ್ದವರ ತಾ ನೋಡಿನೋಡದೊಲಾದ ನಾಕ್ಷಣದಿ ॥ ೧೭ ॥

ತಿರುಕನನು ನಾಕರೆದು ಮಗಳನು ।
ಪರುಷದಿಂದಿತ್ತುದಕೆ ಫಲವಾ ।
ಯ್ತುರಕೆ ನೋಡನು ನುಡಿಸದಿರುವನು ಗರ್ವವೆನಿತಿವನ ॥
ಪುರುಳತೆಯಪಂತಿರಲಿ ಯನ್ನಯ ।
ತರುಳೆ ಮರೆದಳೆ ಹಾ ಯೆನುತ ಕಣ್ ।
ಕೆರಳಿಸುತ ಪಲ್ಡಿನುತ ಕೋಪದೊಳಾಗ ಹೊರೆವಂಟ ॥ ೧೮ ॥

ಸುರರು ಮನುಗಳು ಮುನಿಗಳೆಲ್ಲರು ।
ಪರಮ ಭಕುತಿಯಲಿಂದ ಸಂತತ ।
ಕರಮುಗಿದು ಶಿರಬಾಗಿ ಪೂಜಿಸಿನವಿಸುತಿರ್ಪುದರಿಂ ॥
ಮರೆಯು ತೆಲ್ಲರ ಗರ್ವದಿಂದಲಿ ।
ಮೆರೆವ ದರ್ಪವ ಕಳೆವೆನೆನುತಲಿ ।
ಭರದಿ ಬಂದನು ಪಾಪರೂಪನು ತನ್ನಪತ್ತನಕೆ ॥ ೧೯ ॥

ಪೋಗಿಯುರಮನೆಗಾಗ ಸಚಿವಳ ।
ಬೇಗ ಕರೆಯಿಸಿ ಕೇಳಿರೈ ನೀ ।
ವೀಗಳೆನ್ನಾತ್ಮಜೆಯರೆಲ್ಲರ ಭವನಕಾಂ ಪೋಗೆ ॥
ಬಾಗಿ ಶಿರವನು ನೀಗಿ ಮದವನು ।
ರಾಗದಿಂದಳಿಯಂದಿರೆಲ್ಲರು ।
ಬೇಗನುಪಚರಿಸುತಲಿ ಮನ್ನಣೆಗೈದರತಿಶಯದಿ ॥ ೨೦ ॥

ಅವರ ಸಂಪದ ವವರವೈಭವ ।
ನವರ ಭಕ್ತಿಯುನವರ ಶಕ್ತಿಯು ।
ನವರ ಗೌರವ ವವರ ಪ್ರೀತ್ಯಾದರಣೆ ಸತ್ಕಾರ ॥
ವಿವರಿಸಲ್ಕಳವಲ್ಲವೆಲ್ಲರ ।
ಭವನದುಪಚಾರಗಳ ಕೊಳ್ಳುತ ।
ಭವನಲೋಕಕೆ ಪೋದೆನೈ ನಾ ನತುಲ ಹರುಷದಲಿ ॥ ೨೧ ॥

ಕಂಡೆನಚ್ಚರಿಯಲ್ಲಿ ಯನ್ನನು ।
ಕಂಡು ಕಾಣದ ತೆರದೊಳಿರ್ದರು ।
ರುಂಡಮಾಲಾಭರಣ ಶಿವೆ ಸಹವಾಗಿ ಪ್ರಮಥಗಣ ॥
ಕಂಡವಿಟ್ಟವೊ ಲಾದುದೆನ್ನಗೆ ।
ಖಂಡ ಪರಶುವಿನತುಲ ಗರ್ವವ ।
ಖಂಡಿಸುವ ಹದನೇನುಗೈವುದು ಪೇಳಿರೆಂದೆನಲು ॥ ೨೨ ॥

ಕೇಳು ನೀ ದಕ್ಷಪ್ರಜೇಶ್ವರ ।
ಭಾಳಲೋಚನ ನೊಡನೆ ವೈರವ ।
ತಾಳಿ ಬಾಳುವವೀರ ಶಾರೀರೇಳು ಜಗದೊಳಿನೆ ॥
ಜಾಳು ನುಡಿ ನುಡಿಯುವರೆ ಯನ್ನಯ ।
ತೋಳಬಲ್ಮೆಯ ತೋರ್ಪೆ ನೆನುತಲಿ ।
ಖೂಳತನ ದಿಂದಾಡಿದನು ಘನಗರ್ವದಿಂದಾಗ ॥ ೨೩ ॥

ಎನ್ನ ತನಯುಳ ನಿತ್ತುದಕೆ ತಾ ।
ನಿನ್ನುತಕ್ಕುದುದನ್ನೆ ಗೈದನು ।
ಬನ್ನ ಬಡಿಸದೆ ಬಿಡೆನು ಹಯುಮೇಧವನು ಗೈವುತ್ತ ॥
ಎನ್ನ ಬಂಧುಗಳೆಲ್ಲರನು ನಾ ।
ನನ್ನಿಯಿಂ ಕರೆಯಿಸುತೆ ಗಣವರೆ ।
ರನ್ನು ಬಿಡುವೆನು ರುದ್ರರುದ್ರಾಣಿಯುರ ಸಹಿತದಲಿ ॥ ೨೪ ॥

ಇಂದಿರೇಶನಿಗಗ್ರ ಪೂಜೆಯ ।
ನಿಂದು ಗೈವುತಲಗ್ರ ಭಾಗವ ।
ಚಂದದಿಂದೀಯುವೆನು ಮನುಮುನಿ ಸುರಾಸುರರೊಡನೆ ॥
ಕಂದು ಗೊರಳನ ಬಲವನಾಗಣ ।
ವೃಂದದತಿ ಸಾಹಸವ ಕಾಂಚಿನು ।
ಸಂದೆಗವದೇಕಿನ್ನೆನುತ ನಾಕ್ಷಣದಿ ಘರ್ಜಿಸಿದ ॥ ೨೫ ॥

ದೇವ ಬೇಡುವೆ ಲಾಲಿಸೈ ನೀ ।
ದೇವ ದಾನವರೆಲ್ಲರನುದಿನ ।
ದೇವದೇವನ ಸಭೆಯೊಳತಿಶಯ ಭಕ್ತಿ ಭಾವದಲಿ ॥
ಕಾವುದೈ ಕರುಣದಲಿವರ ಮಾ ।
ದೇವ ನೀನೆಂದೆನುತ ನುತಿಪರು ।
ದೇವನಾರಿಯರೆಲ್ಲರಾಮಾದೇವಿ ಸಹಿತದಲಿ ॥ ೨೬ ।

ಒಂದು ದೆಶೆಯೊಳು ಕೋಟಿ ವಿಷ್ಣು ಗ ।
ಳೊಂದು ದೆಶೆಯೊಳು ಕೋಟಿ ಬ್ರಹ್ಮರ ।
ದೊಂದು ದೆಶೆಯೊಳು ಕೋಟಿಯುಗಣಿತರಷ್ಟದಿಗಧಿಪರು ॥
ಒಂದು ದೆಶೆಯೊಳಂ ದಿವಿಜ ದನುಜರು ।
ಒಂದು ದೆಶೆಯೊಳು ಮನುಮುನೀಶರು ।
ನಿಂದು ನುತಿಸುತಲಿರ್ಪುದನು ನೀ ಕಂಡು ಕೇಳರಿಯು ॥ ೨೭ ॥

ಯಾಗ ಕೋಟಿಗಳನ್ನು ಗೈದರೆ ।
ಗಾಗದ್ಯೆಆ ಸಭೆಯು ಪೊಗಲಿಕೆ ।
ಪೋಗಿ ನಿನ್ನಾ ಹರಿಯು ನಿಲ್ವನು ಕಡೆಯುವಾಗಿಲಲಿ ॥
ನಾಗಭೂಷಣನರಿದು ಕರೆಯಿಸ ।
ಲಾಗ ಭಕುತಿಯಲಿಂದ ಪೋಗುತ ।
ರಾಗದಿಂ ಪದತಳಕೆ ನಮಿಸುವನತುಲ ವಿನಯದಲಿ ॥ ೨೮ ॥

ಭೂಪ ಕೇಳ್ಕೀನದು ನಿಮಿತ್ಯದಿ ।
ಕೋಪಸಲ್ಲದು ಯುಮ್ಮನಂದನೆ ।
ಯೋಪಶಿವನೆಂದೆಂಬ ಭಾವವು ಸರಿಯುದಲ್ಲೆಮಗೆ ॥
ಕಾಪುರುಷರಂದದಲಿ ಕಜ್ಜವ ।
ನೀಪರಿಯನಾವ್ ಗೈದೆವಾದರೆ ।
ಶ್ರೀಪತಿಯು ತಾ ಕಾಯಲಾಪನೆ ಶಿವನಿಗೆದುರಾಂತು ॥ ೨೯ ॥

ಎಂದು ನುಡಿದಾ ಸಚಿವನನು ಜರೆ ।
ದಂದು ಘರ್ಜಿಸೆ ಕೇಳುತಲಿ ತಾ ।
ಬಂದು ಕರಗಳ ಮುಗಿದು ವಿನಯುದಿನಿಂದು ತಲೆವಾಗಿ ॥
ಇಂದಿದೇನಚ್ಚರಿ ಮಹೇಶ್ವರಿ ।
ನಂದನೆಯುಂ ಯುಮುಗೆಂದು ಕೋಪಿಪು ।
ದಂದವೇ ಪತಿದೇವ ನೋಡ್ಶೈ ತಿಳಿದು ನಿನ್ನೊಳಗೆ ॥ ೩೦ ॥

ಧರಣಿಯೊಳು ಮಹಲಿಂಗಮುದಿಸಿದ ।
ಶಿರದೊಳೆಮ್ಮಯ ಕಾಯದಿಂದಲಿ ।
ಪೊರೆಯುಲೀ ಜಗವನ್ನು ಜನಿಸಿದ ಸರ್ವಮಂಗಳೆಯು ॥
ಮರುಳತನದಿಂದೆಮ್ಮ ಸುತೆಯನು ।
ತಿರದೆ ಭವ ತಾನಳಿಯ ನೆನ್ನುತ ।
ಜರೆವರೇನ್ಯೆ ಬೇಡ ಬೇಡಾ ಹರನೊಳತಿ ವೈರ ॥ ೩೧ ॥

ಪರಮ ವೇದಗಳರಸಿ ಕಾಣವು ।
ಹರಿವಿಧಿಗಳತಿನೊಂದರರಿಯದೆ ।
ನಿರುತ ಯೋಗೀಶ್ವರರು ಬಳಲುತಲಿಹರು ನಿಲುಕದಿರೆ ॥
ಹರನೆ ಕಾಲದ ಕಡೆಯ ರುದ್ರನು ।
ಹರನನುಜ್ಞೆಯ ಮೀರಿ ಜೀವಿಪ ।
ರರಿಯಲೀರೇಳ್ ಜಗದೊಳಿಲ್ಲವು ಕೇಳು ಪತಿದೇವ ॥ ೩೨ ॥

ಭವನೊಳತಿ ವೈರವನು ಗೈಯುವ ।
ಸವನ ಬೇಡೈ ಪತಿಯೆ ನಿನಗೆನೆ ।
ಭುವನಭಾರಕ ಗರ್ವದಿಂದಲಿ ಜರಿದು ಮಾನಿನಿಯು ॥
ತವಕದಿಂದಲಿ ಯಾಗಕುಂಡವ ।
ಜವದಿ ರಚಿಯಿಸುತೆಲ್ಲ ದ್ರವ್ಯವ ।
ಸವನಿಪುದು ನೀನೆನುತ ಸಚಿವನಿಗಾಜ್ಞೆ ಗೈವುತಲಿ ॥ ೩೩ ॥

ಬಂದನಸವಸದಿಂದ ಬೊಮ್ಮನ ।
ಮಂದಿರಕೆ ತಾನಂದು ದುಗುಡದ ।
ಲಿಂದ ಕಂಡರುಹಿದನು ಕಥನಾಂತರವನಾವಿಧಿಗೆ ॥
ಬೆಂದ ಮನದಿಂ ನುಡಿದ ದಕ್ಷನಿ ।
ಗೆಂದ ನಾ ಲೋಕೇಶ ಕೇಳೈ ।
ಇಂದು ಹರನನು ಬಿಟ್ಟು ಗೈಯಲು ಯಾಗ ನಡೆಯದೆನೆ ॥ ೩೪ ॥

ಮುಂದುಗಾಣದೆ ದಕ್ಷ ಮನದೊಳು ।
ನೊಂದು ನುಡಿದನು ತಂದೆ ಕೇಳ್ಳೈ ।
ಇಂದುಶೂಲಿಯನುಳಿದು ಯಾಗವ ಗೈಯದಿರೆ ನಾನು ॥
ಚಂದದಿಂ ಪೋಗುತ್ತವನಗಿರಿ ।
ಕಂದರಗಳಲಿ ತಪವ ಗೈಯುವೆ ।
ನೆಂದು ಕರಗಳ ಮುಗಿದುನಿಂದ ನುಮ್ಲಾನವದನದಲಿ ॥ ೩೫ ॥

ನೋಡಿ ದಕ್ಷನ ಮನದ ಭಾವವ ।
ನಾಡಿದನು ಜಡಜಭವ ಬಾರ್ಕೈ ।
ಕೇಡಿಗಿದು ಕಾರಣವದಾಗಿಯೆ ತೋರ್ಪುದದರಿಂದ ॥
ಆಡಿ ಫಲವಿನ್ನೇನು ಕೇಳ್ಳೈ ।
ಗೂಢಪದರಿಪುರಥನಿಗರುಹುತ ।
ನಾಡೆಕಜ್ಜವಗೈವುದೊಳಿತೆಂದೆನುತ ಪೇಳುತಲಿ ॥ ೩೬ ॥

ತವಕದಿಂದವನೊಡನೆ ಬಂದಾ ।
ಭುವನಭವಲೋಚನನ ಕಾಣುತ ।
ವಿವರಿಸಿದನಾದ್ಯಂತ ಚರಿತೆಯನಜನು ಕೇಳುತಲಿ ॥
ಜವದಿ ಹರಿ ಬೆಚ್ಚುತಲಿ ನುಡಿದನು ।
ಭುವನ ಪದಿನಾಲ್ಕರಲಿ ಹರನೊಳು ।
ತವಕದಿಂ ವೈರವನು ಗೈವುತ ಬಾಳುವವರುಂಟೆ ॥ ೩೭ ॥

ಶಿವನೆ ಕೇಳ್ ಸವನಂಗಳೊಡೆಯನು ।
ಶಿವನ ನಾಮವೆ ಮಂತ್ರ ಕೇಳ್ಳೈ ।
ಶಿವಗೆ ಸಲ್ಲುವದಗ್ರ ಭಾಗವದಗ್ರ ಪೂಜೆಯದು ॥
ಶಿವನ ನುಳಿದಿನ್ನಾರಿಗೀಯುವೆ ।
ಜವದಿ ಕೊಳ್ಳುವ ಶಕ್ತರಾರದ ।
ಶಿವನು ಮುಳಿಯಲು ನಿನ್ನನುಳುಹುವರಾರು ಮೂಜಗದಿ ॥ ೩೮ ॥

ಎಂದೆನಲುಹರಿ ಕೇಳಿದಕ್ಷನು ।
ಕುಂದಿ ಖಿನ್ನತೆಯೊಂತು ನಿಲಲು ಕ ।
ಬಂಧರುಹಭವನಾಡಿದನು ಬಹುವಿನಯದಿಂದಾಗ ॥
ಇಂದು ನೀವೀಮುಖವ ಕರುಣದ ।
ಲಿಂದ ನಡೆಯಿಪುದಲ್ಲದಿರೆ ಜವ ।
ದಿಂದ ಪರಣವ ನಳಿಯದುಳಿಯನು ದಕ್ಷನದರಿಂದೆ ॥ ೪೯ ॥

ಸವನವನು ಹವಣಿಸುತಲೆಲ್ಲಾ ।
ದಿವಿಜದನುಜರ ಮನುಮುನೀಶ್ವರ ।
ನಿವಹದೊಡನತಿವಿಭವದೆಸಗಲು ಶಿವನದೇ ಗೈವ ॥
ಭವನುಗ್ಯೆದಪಮಾನದಿಂದಲಿ ।
ಭವಣೆ ಗೊಳ್ಳುತಲಿಹನು ದಯದಿಂ ।
ತವೆಪರಸಿ ಕಳುಹುವುದು ನೀವಾಣತಿಯ ನೀವುತಲಿ ॥ ೫೦ ॥

ಎನಿತು ಸಂಪದ ವಿರ್ದುಫಲವೇ ।
ನೆನಿತುಬಲ ಛಲವಿರ್ದುಗತಿಯೇ ।
ನೆನಿತು ಕರ್ತೃತ್ವಾಧಿಕಾರಗಳಿರ್ದು ಹದನೇನು ॥
ಇನಿತುಗ್ಯೆಯದಲಿರ್ದರಭವನ ।
ಘನತೆ ಘನವೆತ್ತೆಸೆಯೆ ನಮ್ಮಯ ।
ಘನತೆಗಿದು ಕುಂದಲ್ಲವೇನ್ನೆ ಮೂರು ಲೋಕದಲಿ ॥ ೫೧ ॥

ಆದ ಕಥದಿಂದಗ್ರಪೂಜೆಗೆ ।
ಮೋದದಿಂದನುಮತಿಯನೀವುದು ।
ಸಾದರದೆ ಪ್ರತ್ಯಕ್ಷ ಭಾಗವನೀವೆ ವಸುರರಿಗೆ ॥
ಖೇದವೇತಕೆ ಜೀಯಪೌತ್ರಗೆ ।
ಮೋದವೆಸಗುವುದಿದಕೆ ಭಯವೇ ।
ಕಾದರಿಸು ನೀನೆನಲು ಕೇಶವತೂಗಿದನು ಶಿರವ ॥ ೫೨ ॥

ಕೇಳು ನೀಲೋಕೇಶ ದಕ್ಷನ ।
ಭಾಳಲೇಖವ ತಿಳಿಯಲಳವೇ ।
ಬೀಳಹೊಯ್ಯದೆ ಬಿಡನು ಶಿವನುಳುಹುವರ ನಾಕಾಣೆ ॥
ಕಾಳುಮತಿಯೊದಗಿಹುದು ನಿಮ್ಮಗೆ ।
ಪೇಳಿ ಫಲವಿನ್ನೇನು ಪೋಗಿರಿ ।
ವೇಳೆಗೈಯದೆ ರಚಿಸಿರಧ್ವರ ಬಂಡಪೆಸು ಎಂದ ॥ ೪೩ ॥

ಸಾರಿ ಹರದ್ವಾರದಲಿ ಗಂಗಾ ।
ತೀರದಿಹ ಖನಕಲದಿ ಯಜ್ಞದ ।
ಭಾರಿಶಾಲೆಯ ರಚಿಸಿಕರೆಸಿದ ನಖಿಳದ್ವಿಜರನು ॥
ವಾರಿಜಾಕ್ಷನ ಯಾಜಮಾನ್ಯದಿ ।
ವಾರಿರುಹ ಭವ ಬ್ರಹ್ಮನಾಗಿರೆ ।
ಪಾರುವನು ಜಿಡಿಸಿದನು ದೀಕ್ಷಿತನಾಗಿಯೂ ದಕ್ಷ ॥ ೪೪ ॥

ಬಂದರೈ ಮುನಿಮುನಿಗಳೆಲ್ಲರು ।
ಬಂದರೈ ಸುರರಸುರರೆಲ್ಲರು ।
ಬಂದರೈ ದಿಗಧಿಪರು ವಸುಗಳು ಸರ್ವತನುಜೆಯರು ॥
ಬಂದರವರಿವರೆನ್ನದೆಲ್ಲರು ।
ಬಂದುಸೇರಲು ಯಾಗಮಂಟಪ ।
ದಂದು ನಡೆದುತ್ಸವದ ಸಂಭ್ರಮಬಣ್ಣಿಸಲ್ಕಳವೆ ॥ ೪೫ ॥

ಇತ್ತ ಬಾಸುರಪಾಲ ಪಾವಕ ।
ಇತ್ತಬಾ ದಂಡಧರ ನೈರುತಿ ।
ಇತ್ತಬನ್ನಿರಿ ಪಾಶಿವಾಯು ಕುಬೇರಕಿನ್ನರರೆ ॥
ಇತ್ತಬನ್ನಿರಿ ದನುಜಸಮುದಯ ।
ವಿತ್ತಬನ್ನಿರಿ ಯಕ್ಷಗುಹ್ಯಕ ।
ರಿತ್ತಬನ್ನಿರಿ ಮುನಿಗಳೇ ಎನುತಿರ್ದನಬುಜಭವ ॥ ೪೬ ॥

ಸಾಲದಿದ್ದುದು ಜನಕೆಯಾಸುವಿ ।
ಶಾಲಯಾಗದ ಶಾಲೆನಿಲ್ಲಲು ।
ಸಾಲದಿದ್ದುದು ಧರಣಿಯಾ ಉಪಕರಣ ಸಮುದಯಕೆ ॥
ಸಾಲದಿದ್ದವು ನಾಲ್ಕುದಿಶೆಗಳು ।
ಲೋಲವಾಹನ ಚಯಕೆ ನಿಲ್ಲಲು ।
ಸಾಲದಿದ್ದವು ನಯನಗಳು ತಾವೆರಡು ನೋಡಲ್ಕೆ ॥ ೪೭ ॥

ತುಂಬಿದುದು ವರಮಂತ್ರಘೋಷವು ।
ಅಂಬರವತಾ ವಿವಿಧವಾದ್ಯಾ ।
ಡಂಬರಕೆ ಬ್ರಹ್ಮಾಂಡವೊಡೆಯುವೊಲಖಿಳದಿಕ್ತಟಕೆ ।
ತುಂಬೆಘನವಹ ಧ್ವಾನಜಗವನು ।
ತುಂಬಿದುದು ದಕ್ಷಾಧ್ವರಾರವ ।
ತುಂಬಿದುದು ಮೂಜಗದೊಳೆಲ್ಲರ ಕರ್ಣಕುಹರದಲಿ ॥ ೪೮ ॥

ಆಗಬಂದುದಧೀಚಿ ಮುನಿವರ ।
ಬೇಗಯಾಗದ ಶಾಲೆಯೊಳುತಾ ।
ಪೋಗಿನವಿಸಲಿಕಾಗಿ ಯಗ್ರಸ್ಥಾನವೀಕ್ಷಿಸಲು ॥
ಭೋಗಿ ಭೂಷಣನಿಲ್ಲದಿರೆ ಕಂ ।
ಪಾಗ ಲಕ್ಷಿಗಳೀಕ್ಷಿಸುತಕೇ ।
ಳೀಗದಕ್ಷನೆ ಹರನನುಳಿದೀ ಸವನ ನಡೆದಪುದೆ ॥ ೪೯ ॥

ಆರ ನೋಲಿಸಲು ಯಜ್ಞಗೈವರ ।
ದಾರಿಗೀಯುವ ರಗ್ರಭಾಗವ ।
ನಾರ ಪೂಜೆಯುಗೈವರಗ್ರಸ್ಥಾನ ವೀಯುತಲಿ ॥
ಆರ ಮಂತ್ರವ ಪಠಿಸುತಿರ್ಪರ ।
ದಾರನಾಮುವ ನೆನೆದು ಬಾಳುವ ।
ರಾರ ಬಲದಿಂದೀ ಮಹಧ್ವರ ರಚಿಸಿದ್ದೆ ನೀನು ॥ ೫೦ ॥

ಅಂದು ಘನ ತಪವನ್ನು ಗೈದಾ ।
ಇಂದುಶೇಖರನನ್ನು ಮೆಚ್ಚಿಸಿ ।
ನಂದನೆಯು ಮುದದಿತ್ತು ಪಾಲಿಪುದೆಂದು ಬೇಡಿಪುವ ॥
ಇಂದು ಮರದೆಯು ದಕ್ಷ ಕೇಳ್ಕೆ ।
ಮಂದಮತಿ ಥರವಲ್ಲ ತವಕದ ।
ಲಿಂದ ಕರೆತಂದೀವುದಭವಂಗಗ್ರಪೂಜೆಯನು ॥ ೫೧ ॥

ಎಂದು ಪೇಳ್ದ ದಧೀಚಿ ಮುನಿಗಿಂ ।
ತೆಂದನಾ ಖಳ ದಕ್ಷ ಕೋಪದ ।
ಲಿಂದ ಸಾಕ್ಕೆ ನಿನ್ನಪೂರ್ವ ಪುರಾಣವಿಲ್ಲೀಗ ॥
ಚಂದವಾಗದು ಬಹಳಗಳಹದೆ ।
ಬಂದ ಮಾರ್ಗವ ಪಿಡಿದು ಪೋಗೆನೆ ।
ನಿಂದು ನೋಡಿದನಾಗ ಬ್ರಹ್ಮ ಸ್ಥಾನದಿಹವಿಧಿಯ ॥ ೫೨ ॥

ಬೊಮ್ಮ ಕೇಳ್ಕೆ ನೀನು ಯಾಗದಿ ।
ಬೊಮ್ಮನಾದರದೊಳ್ಳಿತ್ಕೆ ಪರ ।
ಬೊಮ್ಮವಾಗಿಪ ಶಿವನ ಮಹಿಮೆಯ ಮರದೆಯಾ ನೀನು ॥
ಒಮ್ಮೆ ಪೂಜೆಯ ಕಳೆದು ಕೊಂಡ್ಕೆ ।
ಒಮ್ಮೆ ಶಿರವನು ಕಳೆದು ಕೊಂಡ್ಕೆ ।
ಹಮ್ಮುದೋರುತಲಿಂದು ಪ್ರಾಣವ ಕಳೆದುಕೊಳ್ಳುವಿಯ ॥ ೫೩ ॥

ಅರಿದರಿದು ಮತಿಭ್ರಮಿತ ನಾದೆ ।
ಯ್ಯರುಹಲಿಲ್ಲವೆ ದಕ್ಷನಿಗೆ ನಯ ।
ವರರೆ ನಿಮ್ಮಯ ವಿಧಿಯು ತಾನೆಂತಿಹುದೊ ತಿಳಿಯದೆವೆ ।
ಮರುಳನಂದದಿ ಮಾತನಾಡದ ।
ಲಿರುವ ಬ್ರಹ್ಮನ ಗತಿಯ ಕಾಣುತ ।
ಕೆರಳಿ ಘರ್ಜಿಸುತಿರ್ದನಾ ಖಳ ದಕ್ಷ ಕೋಪದಲಿ ॥ ೫೪ ॥

ಸರಕುಗೊಳ್ಳದ ಲವನವಚನವ ।
ಭರದಿಮುಂದಡಿ ಯಿಡುತಲಗ್ರದಿ ।
ಮೆರೆವದಾಮೋದರನ ಕಾಣುತಲಾಗಕೋಪದಲಿ ॥
ಪರಮಪುರುಷೋತ್ತಮನು ನೀನೆಂ ।
ದೊರೆವ ವಚನವದೆತ್ತಪೋದುದು ।
ಮರದೆಯೇನ್ಯೆ ನಿನ್ನಪೂರ್ವಸ್ಥಿತಿಯನೆಲ್ಲವನು ॥ ೫೫ ॥

ಕವಿಯಪತ್ನಿಯ ಕೊಲಲಿಕಾತನು ।
ಭುವಿಯೊಳಗೆ ದಶಜನ್ಮತಾಳೆನೆ ।
ಭವನಪ್ರಾರ್ಥಿಸ ಲಭವಮೆಚ್ಚುತ ಲಭಯವೀಯಲ್ಕೆ ॥
ತವಕದಲಿ ಹರುಷವನುತಾಳುತ ।
ಭವನಕೈದುದು ದನ್ನುಮರದೆಯ ।
ವಿವರಿಸುವೆ ಕೇಳಿನ್ನು ದೈತ್ಯರಹರಣಗೊಳ್ಳಲ್ಕೆ ॥ ೫೬ ॥

ಪರಮಭಕುತಿಯಲಿಂದ ಲೀಶನ ।
ಕುರುಹದೆಂದೆನಿ ಪಮಳಲಿಂಗವ ।
ಹರುಷದಿಂ ಸಾಹಸ್ರಕಮಲಗಳಿಂದ ಲರ್ಚಿಪಲಿ ।
ಭರದೊಳೊಂದಲರನ್ನು ಕುಂದಿಸ ।
ಲಿರದೆ ನಯನವ ಕೀಳ್ದುಧರಿಸುತ ।
ಧರೆಯರಿಯೆ ಪಾರುಂಬಳೆಯ ಪಡೆದುದನು ನೀಮರದ್ಯಾ ॥ ೫೭ ॥

ಸಲ್ಲದೈ ಶಿವರಹಿತಯಾಗವು ।
ಸಲ್ಲದೈ ಯನಗಗ್ರಸ್ಥಾನವು ।
ಖುಲ್ಲತನವಿದು ಸಲ್ಲದೆಂದೀ ದಕ್ಷವಿಧಿಗಳಿಗೆ ॥
ಬಲ್ಲಿದನೆ ಮತಿಯನ್ನುಪೇಳದೆ ।
ಸಲ್ಲದುದ ನೀನೆಂತುಗೈದೈ ।
ನಿಲ್ಲುವಿರ ನೀವೆಲ್ಲ ಶಿವತಾ ಮುನಿದಸಮಯದಲಿ ॥ ೫೮ ॥

ಕಾಲಕಾಲನು ಮುನಿದ ಕಾಲದಿ ।
ಕಾಲಮೃತ್ಯುವೆ ಯಾಗಿಜಗಗಳ ।
ಕಾಲನಾಧೀನವನು ಗೈಯುವ ಸರ್ವಜೀವಿಗಳ ॥
ಕಾಲರುದ್ರನ ಕೋಪದಿಂದಲ ।
ಕಾಲವಾದರು ನಿಲ್ಲಲಾರ್ಗಳ ।
ಪಾಲಿಪೆಯ ನೀನೋಡುನೋಡೈ ತಿಳಿದು ನಿನ್ನೊಳಗೆ ॥ ೫೯ ॥

ಬಂದಿಹುದು ತಾನಿಂದು ನಿನ್ನಗೆ ।
ಒಂದು ದಿನದೀ ಯಗ್ರಸ್ಥಾನವು ।
ಹೊಂದಿಕುಳಿತಿಯ ಸಿಂಹವಿಷ್ಟರದಲ್ಲಿ ಸೊಗಸಾಗಿ ॥
ಮುಂದೆಬರ್ಪುದ ಕಾಂಬೆ ಧೈರ್ಯದ ।
ಲಿಂದಲುಳಿಪುದು ಜನ್ಮವಿದನೀ ।
ನೆಂದು ಕೋಪಾಟೋಪದಿಂದಲಿ ನುಡಿದನಾಮುನಿಪ ॥ ೬೦ ॥

ಯಾಗವಿದು ತಾ ಧ್ವಂಸವಾಗಲಿ ।
ಯಾಗಕರ್ತನು ನಾಶವಾಗಲಿ ।
ಯಾಗದಿಹ ಸುರರಂಗಭಂಗವದಾಗಿ ದುಃಖಿಸಲಿ ॥
ಯಾಗರಕ್ಷಿಪೆನೆಂಬ ವೀರರು ।
ಬೇಗೆಗೊಂಡಾ ವನದೊಲಾಗಲಿ ।
ಬೇಗ ಹರನೀಕ್ಷಿಸಲಿ ಕೋಪದೊಳೆಂದು ಶಪಿಸಿದನು ॥ ೬೧ ॥

ಇಂತು ಶಾಪವನಿತ್ತು ಮುನಿಪತಿ ।
ಯಂತಕಾಂತಕನಂತೆ ತೋರುತ ।
ತಾಂತಿರುಗಿ ತೆರಳಿದನು ತನ್ನಾಶ್ರಮಕೆ ತವಕದಲಿ ॥
ಮುಂತೆಶೂಲಿಯು ಮುನಿಯೆ ಸವನಕ ।
ದೆಂತು ಧಾಳಿಯು ಬರ್ಪುದೋಯನು ।
ತಂತೆವಾಸಿಗಳಲ್ಲಿಸರಿದರು ಕೆಲರು ಭಯಗೊಂಡು ॥ ೬೨ ॥

ಆದುದ್ದೈ ಕಳವಳವು ದಿವಿಜರಿ ।
ಗಾದುದ್ದೈ ಘನಭಯವು ಮುನಿಗಳಿ ।
ಗಾದು ದಜಹರಿಗಳಿಗೆ ಚಿಂತೆಯದಂತರಂಗದಲಿ ॥
ವೋದವಡಗಿದು ದೆಲ್ಲರಾಸ್ಯದಿ ।
ಖೇದವತಿಶಯವಾಗೆ ಕಂಪನ ।
ವಾದು ದಭವನಪೇಸುಗೈವನೊ ಯೆಂದುಬೆದರಿದರು ॥ ೬೩ ॥

ವ್ಯೋಮಕೇಶನ ರಾಮಣೀಯಕ ।
ವಾಮದೇವ ಮುಖಾಂಬುಜೋದ್ಭವ ।
ಸ್ವಾಮಿ ಶ್ರೀಗುರುದಾರುಕೇಶ್ವರ ನಿಮ್ಮಪದಯುಗವ ॥
ಪ್ರೇಮಭಕುತಿಗಳಿಂದ ನುತಿಸುವೆ ।
ಕಾಮಿತಾರ್ಥವ ನಿತ್ತುಪಾಲಿಸು ।
ಭೂಮಿ ರವಿ ಶಶಿಯುಳ್ಳ ವರಿಯನ್ನಖಿಲಭಕ್ತರಿಗೆ ॥ ೬೪ ॥

ವೀರಭದ್ರೇಶ್ವರನ ಮಹಿಮೆಯ ।
ಭೂರಿಭಕುತಿಯಲಿಂದ ಸಂತತ ।
ವಾರು ಪೂಜಿಸುತಿಹರೊ ಪಠಿಸುತಲಿಹರೊ ಪೇಳುವರೊ ॥
ಸಾರಿಕೇಳುವರೆಲ್ಲರಿಗೆ ಮನ ।
ವಾರಭೀಷ್ಟವನಿತ್ತು ಪಾಲಿಪ ।
ಮಾರಮಣ ವಿಧಿ ಸುರಪಯಕ್ಷೇಶಾದಿವಿನುತಶಿವ ॥ ೬೫ ॥

ಎರಡನೆ ಸಂಧಿ ಸಂಪೂರ್ಣಂ

ಅಂತು ಸಂಧಿ ೨ ಕ್ಕಂ ಪದನು ೮೬ ಕ್ಕಂ

ಮಂಗಳ ಮಸ್ತು

ಶ್ರೀ ವೀರಭದ್ರೇಶ್ವರಃ ಪ್ರಸನ್ನಃ

# ಶ್ರೀ ವೀರಭದ್ರೇಶ್ವರ ಪುರಾಣ





## ಮೂರನೇ ಸಂಧಿ

* ಭಾಮಿನೀ ಷಟ್ಪದಿ *

ರುದ್ರನಗ್ನಿಯ ನೇತ್ರದುದಯಿಸಿ ।
ಭದ್ರಕಾಳಿಯ ಕರವಪಿಡಿಯುತ ।
ಕ್ಷುದ್ರದಕ್ಷನ ಶಿರವಳಿದ್ರಿಸಿಮೆರೆದ ವೀರೇಶಃ ॥

ಧರೆ ನಭಗ ಳೊಂದೆನಿಸೆ ಪರ್ಬುತ ।
ಚರಿಪ ಸುರಮುನಿಗಳನು ।
ದಹಿಸುತ ಕರಕರೆಯು ಗೊಳಿಸುತ್ತಲಖಿಳರಿ ಗತುಲಭಯವಿತ್ತ ॥
ದುರುಳ ಜ್ವಾಲಾಸುರನ ಹರಿಸುತ ।
ಭರದಿ ಮಡಿದರಿ ಗಸುಗಳಿತ್ತತಿ ।
ಕರುಣದಿಂ ಪಾಲಿಸಿದ ವೀರೇಶ್ವರನೆ ರಕ್ಷಿಪುದು ॥ ೧ ॥

ದಶದಿಶದಿ ಸಂಚರಿಪ ಜೀವಿಗ ।
ಳೊಸೆದು ಪೊಗುವಂದದಲಿ ಬಾಯ್ದ್ದೆರೆ ।
ದಸವಸದಿ ನುಂಗುತ್ತಲೀಪರಿ ಗೈಯೆಮುನಿಸುರರು ॥
ಅಸಮನಯುನನೆ ಪಾಲಿಸೆನಲಸ ।
ವಸದಿ ಬಂದಾ ವ್ಯಾಳದೈತ್ಯನ ।
ಕುಸರಿದರಿ ದವರಸುವ ಪೊರೆದೊಲು ಪಾಲಿಸೈಶರಭ ॥ ೨ ॥

ಮುನಿದು ನಿಲ್ಲದೆ ಶಪಿಸಿ ಪೋಗಲು ।
ಮುನಿಯೊಡನೆ ಪೋದರು ಪಲಂಬರು ।
ಮುನಿಗಳಂಜುತಲತಿಜವದಿ ತಮ್ಮಾಶ್ರಮಂಗಳಿಗೆ ॥
ಮುನಿವ ಶಿವನೆಂದೆನುತ ನಿರ್ಜರ ।
ಮುನಿಯು ಮೆಲ್ಲನೆಸರಿದು ಸಭೆಯಿಂ ।
ಎನುತ ಕೈಲಾಸಕ್ಕೆಗಮಿಸಿದ ನತುಲವೇಗದಲಿ ॥ ೩ ॥

ಪ್ರಮಥಗಣದಿಂ ರುದ್ರಗಣದಿಂ ।
ಅಮಿತತೇಜದಿ ಭದ್ರಪೀಠದೋ ।
ಉಮೆ ಸಹಿತಶೋಭಿಸುವ ಪರಮೇಶ್ವರನ ಸಭೆಗೈದಿ ॥
ಸುಮನದಿಂ ಸಾಷ್ಟಾಂಗವೆಸಗುತ ।
ಅಮಿತ ಭಕುತಿಯಲಿಂದ ನಮಿಸುತ ।
ವಿಮಲ ಕರಗಳನೆರಡು ಮುಗಿಯುತ ನಿಂದುವಿನಯದಲಿ ॥ ೪ ॥

ದೇವಕೇಳೈ ದಕ್ಷಗರ್ವದಿ ।
ದೇವದಾನವ ಮನುಮುನೀಶ್ವರ ।
ಭಾವಭವಪಿತ ವಿಧಿಯುಮೊದಲಾದಖಿಳ ರೊಡಗೂಡಿ ॥
ದೇವ ನಿಮ್ಮನುಳಿದು ಯಾಗವ ।
ತಾವಿಗಡತನದಿಂದ ಗೈಯುವ ।
ಭಾವನೋಡಲು ಬಹಳಗರ್ವದೊಳಿಹನು ಕೇಳಿನ್ನು ॥ ೫ ॥

ನಿಮ್ಮಗೀಯದಲಗ್ರ ಭಾಗವ ।
ಕಮ್ಮಗೋಲನ ಪಿತನಿಗೀಯಲು ।
ಬೊಮ್ಮನಾಣತಿವಡೆದು ಇಂದಾಕಮಲಸಂಭವಗೆ ॥
ಬೊಮ್ಮಪದ ತಾನಿತ್ತುಯಜ್ಞವ ।
ಹಮ್ಮಿನಿಂದಲಿಗೈವು ತಾದಿನ ।
ಘಮ್ಮನೇ ಬಿಟ್ಟಿಹನು ಹಯವನು ಭೂಮಿಯಲಿಚರಿಸೆ ॥ ೬ ॥

ಎಲ್ಲರಂದದಿ ಬಂದನಲ್ಲಿಗೆ ।
ನಿಲ್ಲ ದಂದುದಧೀಚಿ ಮುನಿವರ ।
ಸಲ್ಲಲಿತಯಜ್ಞದಲಿ ನೋಡಿದ ಸಗ್ರಸ್ಥಾನವನು ॥
ಎಲ್ಲ ದೇವರ ದೇವನೀವ ।
ಲ್ಲಿಲ್ಲದುದ ಕಾಣುತಲಿ ಕೋಪದಿ ।
ಸಲ್ಲದೈ ಹರರಹಿತಯಾಗವಿದೆಂದು ಶಪಿಸುತಲಿ ॥ ೭ ॥

ಹರಿಯಜಾದ್ಯರ ಜರೆಯುತಲಿತಾ ।
ತೆರಳಲೊಡನೈದಿದರು ಗೌತಮ ।
ವರವಸಿಷ್ಠಾಗಸ್ತ್ಯರಾ ಉಪಮನ್ಯು ಮೊದಲಾಗಿ ॥
ಸರಿದರಗಣಿತ ರಿಸಿಗಳಿದನರಿ ।
ದಿರದೆ ನಿಲಿಸಿದರಾಗಲುಳಿದರ ।
ನರರೆ ವಿಧಿಭಗಪೂಷಸುರಪಾದಿಗಳು ಶೌರ್ಯದಲಿ ॥ ೮ ॥

ಎಂದು ಪೇಳಲು ಕೇಳಿಶಿವತಾ ।
ನಂದು ದರಹಸಿತಾಸ್ಯ ನಾಗಲು ।
ನಿಂದು ಶಿವೆಕರಗಳನು ಮುಗಿಯುತ ಲತುಲವಿನಯದಲಿ ॥
ಇಂದುಧರ ಜವದಿಂದ ಪೋಗುತ ।
ತಂದೆಸಲ್ಲದಿದೆಂದು ಪೇಳುವೆ ।
ನಿಂದು ನೀವೆನಗೀವುದನು ಮತಿಯೆಂದು ಪ್ರಾರ್ಥಿಸಲು ॥ ೯ ॥

ಕೇಳಬಲೆ ಬಗೆಗೊಳ್ಳ ದಕ್ಷಕ ।
ರಾಳಮತಿ ಪರಿಭವವದಪ್ಪುದು ।
ಪೇಳಿಫಲವೇನದು ನಿಮಿತ್ತದಿ ಪೋಗದಿರು ನೀನು ॥
ವ್ಯಾಳ ಗರ ಮಹರೋಗ ಘನ ಭೇ ।
ತಾಳ ಗಳಿಗುಂಟೋಷಧಿಯು ಶಿಳಿ ।
ಖೂಳಮೂರ್ಖರಿಗಿಲ್ಲ ಮದ್ದೀ ಜಗದೊಳದರಿಂದೆ ॥ ೧೦ ॥

ಕೇಡುತಾಬರುತಿರ್ಪ ಸಮಯದಿ ।
ಕೊಡುವುದು ದುರ್ಬುದ್ಧಿ ದುಷ್ಟನಿ ।
ಗಾಡಲೇನವಗಾರು ಪೇಳೆ ಸುನೀತಿ ಬಗೆಗೊಳ್ಳ ॥
ನೋಡ ಸವರನು ನುಡಿಸೆತಾ ಮಾ ।
ತಾಡದಿರುತಿಹ ಮಡದಿಮಣಿಕೇಳ್ ।
ಮೂಢನವನೀ ತೆರದೊಳಿರುತಿಹ ನೀಗಲಾದಕ್ಷ ॥ ೧೧ ॥

ಎನಲು ಶಿವಗಿಂತೆಂದಳಾಶಿವೆ ।
ಜನಕ ನೀತಿಯ ಕೇಳದಿರ್ದರ ।
ದೆನಗೆ ಪರಿಭವವೆನಿಪುದೇ ಮಹದೇವ ನೀವಿಂದು ॥
ಸನುಮತದೊಳನು ಮತಿಯನೀವುದು ।
ತನಗೆನುವ ಮಹದೇವಿಗಭವನು ।
ವನಿತೆ ನೀನನುಭವಿಪೆ ಮುಂದಪ್ಪುದನುಯೆಂದೆನುತ ॥ ೧೨ ॥

ನಂದಿ ಪ್ರಮುಖರ ನೊಡನೆಕಳುಹಲು ।
ಬಂದಳತಿ ಜವದಿಂದತನ್ನಯ ।
ತಂದೆಯೆಂದೆನಿಪತುಳ ಖೂಳನ ಪುರಕೆ ದುಗುಡದಲಿ ॥
ಬಂದು ತವಕದೊಳೋರ್ವ ಗಣಪನು ।
ಬಂದಪಳು ಮಹದೇವಿ ಕಳುಹೈ ।
ಬಂಧುಗಳ ಕರೆತರಲು ಗೌರವಿಸುತ್ತ ಲೀಗೆನಲು ॥ ೧೩ ॥

ಕೇಳಿಕೇಳದ ತೆರದೆಮೌನವ ।
ತಾಳಿತಾನಿರುತಿರ್ದ ದಕ್ಷನು ।
ಕೇಳಿಪರುಷವತಾಳಿ ನುಡಿದರು ನೆರೆದ ಸುರವರರು ॥
ಫಾಲಲೋಚನ ನರಸಿಬಂದಳು ।
ಶೀಲೆಜಗದಧಿದೇವಿ ಬಂದಳು ।
ಕಾಲಕಾಲಾತೀತೆ ಬಂದಳು ಮೂಜಗದಜನನಿ ॥ ೧೪ ॥

ಜನ್ನದುನ್ನತಲಕುಮಿ ಬಂದಳು ।
ಜನ್ನಕಿನ್ನಪಜಯವ ದಿಲ್ಲವು ।
ಜನ್ನತಾನಡೆಯುವುದು ಈರೇಳ್‌ಜಗದಿಮೇಲೆನಿಸಿ ॥
ಇನ್ನುದಕ್ಷನ ಪುಣ್ಯಬಣ್ಣಿಸೆ ।
ಪನ್ನಗೇಶ್ವರಗಾಗದೆನುತಲಿ ।
ಜನ್ನದೊಳಗಿಹ ಮುನಿಗಳಾಡುತ ಪೊಂದಿದರುಮುದವ ॥ ೧೫ ॥

ಎಂದು ಯಾಗದ ಶಾಲೆಯೊಳಗಿಹ ।
ರಂದು ಸಂತಸವನ್ನು ಪೊಂದಲು ।
ಬಂದಳಾಗಳೆ ಸತೀದೇವಿಯು ಜನ್ನಗೈವೆಡೆಗೆ ॥
ಬಂದೆಯಾನೀ ನಿಲ್ಲಿಬಾರೌ ।
ಎಂದು ಸಹಜಾತೆಯರು ಮಾತೆಯು ।
ಬಂದು ಕರೆಯಲು ಕಂಡುಕೋಪಿಸಿಕೊಂಡನಾ ದಕ್ಷ ॥ ೧೬ ॥

ಅಂದವನ ಮತ್ತತೆಯ ನೋಡದೆ ।
ಬಂದು ಪಿತನೊಡನಾಗ ನುಡಿದಳು ।
ತಂದೆ ಕೇಳಿರೇಳು ಜಗದೊಡೆಯನೊಳು ವೈರವಿದು ॥
ಚಂದವೇನೈ ಹರನಕರೆಯಿಸು ।
ತಿಂದು ಸಲ್ಲಿಪುದಗ್ರಪೂಜೆಯ ।
ನೆಂದು ಪೇಳಲುಕೇಳಿ ಕಿಡಿಕಿಡಿಯಾದನಾದಕ್ಷ ॥ ೧೭ ॥

ಜನ್ನವನು ಗೈಯುವರು ಮೊದಲಲಿ ।
ಜನ್ನ ಗಧಿಪತಿಯಾದ ಪರಶಿವ ।
ನನ್ನುಪೂಜಿಸಿದಲ್ಲ ದಾರಂಭಿಸರು ತಿಳಿನೀನು ॥
ಯುನ್ನಪತಿತಾನಿಲ್ಲದಿಹ ಯಿ ।
ನಿನ್ನಯಾಗ ವಮಂಗಲವು ತಿಳಿ ।
ದಿನ್ನು ಶಿವನನು ಕರೆದು ಪೂಜಿಸಿ ಮಂಗಲವಪಡೆಯ್ಯೆ ॥ ೧೮ ॥

ಜೇಡಬೇಡ್ಶೈಹರನ ವೈರವು ।
ಬೇಡುವೆನು ಪಿತನೆಂಬ ಭಾವದಿ ।
ಕೇಡುಬಪ್ಪದೆ ತಪ್ಪದೈವ್ಮೃಡಕೋಪದೊಳು ನೋಡೆ ॥
ಕೂಡೆಸವನವು ನಿಂದುವಾದಡೆ ।
ನಾಡಿಸೊಳಗಪಮಾನ ವಲ್ಲವೆ ।
ಮೂಢ ಜನರಂಪದಲಿ ಗರ್ವದಿದುಡುಕಬೇಡೆನಲು ॥ ೧೯ ॥

ಈ ಶತಧೃತಿ ಈ ರಮಾಪತಿ ।
ಈ ಸುರೋತ್ತಮನೀ ನಿಶಾವರ ।
ನೀಸುರೇಶ್ವರನಾದಿ ದಿಕ್ಪಾಲಕರು ದಾನವರು ॥
ಲೇಸಬಯುಸುತ ಶರಶರಾಸನ ।
ಪಾಶಖಡ್ಗಂಗಳನು ಧರಿಸುತ ।
ಲೀಸವನ ಕಾಯ್ದಿರಲು ನಿನ್ನಯಪಶಿಯದೇಗೈವ ॥ ೨೦ ॥

ಈತನೆ ತಿಳಿಸ್ವಯಂಭೂ ತಾ ।
ನೀತ ನಚ್ಯುತ ನೀತವಜ್ರಿಯು ।
ಈತನಗ್ನಿಯು ಈತಕಾಲನುಈತ ದೈತ್ಯಪತಿ ॥
ಈತಪಾಶಿಯು ಈತನತಿಬಲ ।
ನೀತನತಿ ವಿಖ್ಯಾತಧನಪತಿ ।
ಭೀತಿಯನು ತೊರೆದವರು ತಾವತಿಬಲದಿ ರಕ್ಷಿಪರು ॥ ೨೧ ॥

ಮುಸಣವಾಸಿಯು ತಿರುಕಗೊರವನು ।
ಪಸಿಯ ದೊಗಲುಡಿಗೆಯನು ಗೈ ।
ದಸವಸದಿ ಪಾವನೆಪಿಡಿದು ಎಲುಮಾಲೆಗಳ ತಾಪೊತ್ತು ॥
ಘಸಣೆಗೊಳುತಲಿ ಮರುಳನಂದದಿ ।
ರಸೆಯೊಳಗೆ ಚರಿಸುವನನೀ ಬ ।
ಣ್ಣಿಸುವೆ ಪತಿಯುಂಬೆಸಕದಿಂ ಪಾಸಟಿಯೆಯನಗೆನಲು ॥ ೨೨ ॥

ಈರಮೂವರ ನಜನುನೀ ಸಹಿ ।
ತಾರನುಳಿಸದ ಲಖಿಳಜಗಗಳ ।
ಸೂರೆಗೊಳ್ಳುತ ಲಯವಗೈವನು ಕಾಲದಂತ್ಯದಲಿ ॥
ತೋರುವೀಜಗವೆಲ್ಲವಂದಿನ ।
ಘೋರ ಮುಸಣದ ಭೂಮಿಯಂದದಿ ।
ತೋರುವದು ತಾನಲ್ಲಿನೆಲಸಿರುತಿಹನು ಸಂತಸದಿ ॥ ೨೩ ॥

ಮುಸಣವಾಸಿಗನೆಂದು ನುಡಿಯುವಿ ।
ಮುಸಣವಾಸದ ಪರಿಯನರಿದೆಯ ।
ಮುಸಣವೇತಾನಂದು ನಿನ್ನೀಪುರವು ಸಹವಾಗಿ ॥
ರಸೆಯೊಳಗೆ ವೈಕುಂಠವಿಲ್ಲವು ।
ಅಸಮ ಕೈಲಾಸದುವೆ ಇಲ್ಲವು ।
ಘುಸಣೆಗೊಳ್ಳುತ ನುಡಿವೆ ನೀನಿದರಂದವರಿಯದಲೆ ॥ ೨೪ ॥

ಅರಿಯದಲೆ ಶಿವನಿರವ ಗರ್ವದಿ ।
ತಿರುಕ ನೆನ್ನುತ ನುಡಿಯುತಿರುವೆಯ ।
ಸುರಪ ವಿಧಿಹರಿಧನದ ಮೊದಲಾ ದಖಿಳ ದಿವಿಜರಿಗೆ ।
ಪಿರಿದೆನಿಪ ಸಂಪದವನಿತ್ತಿಹ ।
ಪರಮ ಪುರುಷನು ತನ್ನಬೇಡ್ದರಿ ।
ಗರಿದೆನಿಪ ಘನಶಿರಿಯನೀಯುವ ನಿರುತನೈಜವಿದು ॥ ೨೫ ॥

ಅರರದೇತಕೆ ನೀನೆಪೂರ್ವದಿ ।
ಹರನೆ ಪೊರೆಯೆಂದೆನುತ ತಪಿಸಲು ।
ಕರುಣದಿಂದೀ ಸಂಪದವ ನಿನಗಿತ್ತುದನು ಮರೆದು ॥
ತಿರುಕನೆಂದತಿ ಗರ್ವದಿಂದಲಿ ।
ಜರಿಯುತಿಹೆಯಾ ಶಿವನ ಮಹಿಮೆಯ ।
ನರಿಯಲಳವೇ ನಿನಗೆ ವೇದಗಳರಿಯದಿರುವಲ್ಲಿ ॥ ೨೬ ॥

ಇನ್ನು ಕೇಳ್ಳೆಗೊರವ ಶಿವನೆಂ ।
ದೆನ್ನುತಲಿ ಗರ್ವದಲಿಸುಡಿಯುವೆ ।
ನಿನ್ನಹರಿಯಜ ರೀಸುರಾಸುರರಖಿಲ ಮುನಿವರರು ॥
ಸನ್ನುತಿಪ ರನುದಿನದಿ ಕರಗಳ ।
ನಿನ್ನ ಮುಗಿದತಿ ಭಕ್ತಿಭಾವದಿ ।
ಪನ್ನಗೇಶ್ವರ ಧರನೆಪೊರೆಯ್ಯೆ ಗುರುವೆ ನೀನೆನುತ ॥ ೨೭ ॥

ಗುರುವೆ ತಾನಾಗಿರುವ ಕೇಳ್ಳೆ ।
ನರ ಸುರಾಸುರರಖಿಳ ಜಗಗಳ ।
ಪಿರಿಯರೆಂದೆನಿ ಪೆಲ್ಲರಿಂಗೆಯು ನೀನು ಮೊದಲಾಗಿ ॥
ಅರಿಯದಲೆ ಗುರ್ವರ್ಥವನು ನೀ ।
ಗೊರವನೆಂದೆನುತಿರ್ಪೆ ನೀನಿದ ।
ನರಿದು ಕೊಳ್ಳೈ ನಿನ್ನಸವನದೊಳಿರ್ಪ ಹಿರಿಯರಲಿ ॥ ೨೮ ॥

ಪಸಿಯುದೊಗಲುಡಿಗೆಯನು ಯನ್ನುವೆ ।
ಘಸಣಿಗೊಳಿಸುತ ಲೀಜಗಂಗಳ ।
ಕುಸುರಿದರಿಯುತ ಬಂದನಾ ಕರಿ ದೈತ್ಯಗರ್ವದಲಿ ॥
ಅಸಮ ಸಾಹಸ ನಿದಿರಿನಲಿ ಸುರ ।
ವಿಸರನಿಲ್ಲದೆ ಬಂದು ಶಿವನಡಿ ।
ಬಿಸಜಗಳಿಗೆರಗುತ್ತ ಪಾಲಿಪುದಭವನೀನೆನಲು ॥ ೨೯ ॥

ಕರುಣನಿಧಿ ತಾನಭಯ ವೀಯುತ ।
ತೆರಳಿಗಜ ದೈತ್ಯನನು ಸಮರದಿ ।
ತರಿಯುಲವನತಿ ಭಕ್ತಿಭಾವದಿ ನುತಿಸಿದೇವೇಶ ॥
ಧರಿಸುತನವರ ತೆನ್ನಚರ್ಮವ ।
ಪರಮ ಪಾವನ ಗೊಳಿಪುದೆಂದೆನೆ ।
ಪರಸಿಯುವನನು ಧರಿಸಿಮೆರೆಯುವ ಕರಿಯುಚರ್ಮವನು ॥ ೩೦ ॥

ಅಂದುವ್ಯಾಘ್ರಾ ಸುರನಬಾಧೆಗೆ ।
ನೊಂದುದಿವಿಜರು ಬಂದು ಮೊರೆಯಿಡೆ ।
ಕೊಂದನಾಕ್ಷಣ ಪೋಗಿ ಸಮರದಿ ದುಷ್ಟದೈತ್ಯನನು ॥
ಇಂದುಧರ ನೀನೆನ್ನ ಚರ್ಮವ ।
ನಿಂದುಧರಿಯಿಸಿ ಪಾಲಿಸೆಂದೆನೆ ।
ಚಂದದಿಂಧರಿಸುತ್ತೆ ಮುಕ್ತಿಯನಿತ್ತು ಪೊರೆದತಿಳಿ ॥ ೩೧ ॥

ಹರಿಸುತೀರ್ವರ ಬೇಡಕೊಳೆತಾ ।
ಧರಿಸಿಮೆರೆಯುವ ಕೃತ್ತಿವಾಸೆಂ ।
ಬುರುತರದನಾಮದಲಿ ಧರೆಯಲಿಕೇಳು ನೀನಿನ್ನು ॥
ಉರಗಭೂಷಣ ನಾದಪರಿಯದ ।
ನರುಹುವೆನು ಪೂರ್ವದಲಿಯತಿಗಳು ।
ಮರೆದು ಶಿವನಡಿಗಳನು ಹಂಕರಿಸಲ್ಕೆ ಹರನರಿದು ॥ ೩೨ ॥

ಯತಿಗಳತಿಗರ್ವವನು ತರಿಯಲು ।
ಸತಿಯರನು ಕರೆದೊಯ್ಯೆಮಾಯದಿ ।
ಶಿತಿಗಳನಹತಿಸೆನುತ ಹೋಮದಿಪಡೆದು ವಿಷಧರವ ॥
ಅತಿಜವದಿ ಕಳುಹಲ್ಕೆಬರಲದ ।
ಪತಿತಪಾವನ ಕರದಿಪಿಡಿದೀ ।
ಕ್ಷಿತಿಯಪೊರೆದನು ನಾಗಭೂಷಣನೆಂಬ ನಾಮದಲಿ ॥ ೩೩ ॥

ಚಂಡದೈತ್ಯರ ತಂಡವದು ಭೂ ।
ಮಂಡಲವ ಕರಕರೆಯಗೊಳಿಸಲು ।
ದಿಂಡುರುಳ್ಚುತಲವರು ಪ್ರಾರ್ಥಿಸಲಕುಲ ಹರುಷದಲಿ ॥
ರುಂಡಗಳ ಧರಿಸುತ್ತಮೆರೆದನು।
ರುಂಡಮಾಲಾಭರಣ ನೆನ್ನುತ ।
ಕಂಡುಕಂಡದ ಪರಿಯೆಯಾ ನೀನಿಂದು ಪರಿಯಂತ ॥ ೩೪ ॥

ಜಡಜಭವ ಸಂಭವನು ನೀನೈ ।
ಜಡಮತಿಯು ನಿನಗಿಹುದು ಸಹಜವು ।
ಮೃಡನ ಘನತೆಯ ನೆತ್ತ ಬಲ್ಲೈ ಪೇಳಿ ತಿಳಿದಪುದೇ ॥
ಬಡನರಿಯು ಸಿಂಗವನು ಜರೆದೊಲು ।
ನುಡಿವ ನಿನ್ನಯ ನುಡಿಯು ಕೇಳುತ ।
ಪೊಡವಿಜನ ಕೈಹೊಡೆದು ನಗರೇ ತಿಳಿದು ನೀನೋಡೈ ॥ ೩೫ ॥

ಮಾತೆಯೂ ಮಾಂಗಲ್ಯವನು ನಾ ।
ಪ್ರೀತಿಯಿಂದುಳುಹಲ್ಕೆ ಬಂದೆನು ।
ನೀತಿಗೇಡಿಯು ತೆರದಿ ನುಡಿವರೆ ಮನಕೆ ಬಂದಂತೆ ॥
ಖ್ಯಾತನೀರೇಳ್ ಜಗಗಳೊಡೆಯನು ।
ಭೂತಪತಿಯಿಷ್ಟಾರ್ಥದಾಯಕ ।
ನಾಥನಡಿಗಳಿಗೆರಗಿ ಬಾಳ್ಕೆ ತಂದೆ ನೀನಿನ್ನು ॥ ೩೬ ॥

ಕೇಡು ತಪ್ಪದು ನೋಡು ನಿನ್ನಗೆ ।
ಗೂಢಪದ ಭೂಷಣನು ಮುನಿದೊಡೆ ।
ನೋಡು ನಿನ್ನೀ ವಿಷ್ಣು ಬ್ರಹ್ಮೇಂದ್ರಾದಿಗಳು ಜವದಿ ॥
ಜೋಡುಕರಗಳ ಮುಗಿದು ಮಹಿಮೆಯ ।
ಪಾಡುತಲಿ ಶಿವನಡಿಯ ಪಿಡಿಯುತ ।
ನಾಡೆ ಪಾಲಿಸು ಎಂಬ ಸಮಯದೊಳುಳಿವೆ ನೀನೋರ್ವ ॥೩೭॥

ಅದು ನಿಮಿತ್ತದಿ ವೈರ ಸಲ್ಲದು ।
ಪದಪಿನಿಂ ಶಿವನಡಿಯ ಪಿಡಿಯುತ ।
ಪದುಳದಿಂ ಬಾಳುವದು ಲೇಸೈ ತಂದೆ ನೀನೆನಲು ॥
ಕುದಿವ ಕೋಪದಿ ದಕ್ಷ ಸಹಿಸದ ।
ಲೊದರಿದನು ಮನಬಂದ ತೆರದಲಿ ।
ಸದರವೇತಾ ನಿನ್ನ ಪತಿಯುನಗೆಂದು ನಿಂದಿಸುತ ॥ ೩೮ ॥

ಇನನ ನಿಂದಿಪ ಖೂಳ ದಕ್ಷನ ।
ತನಯಳೆಂದೆನಿಸಿರ್ಪ ಯನ್ನೀ ।
ತನುವನೀಗಲೆ ಬಿಡುವೆನೆನುತಲಿ ಕೆರಳಿ ಕೋಪದಲಿ ॥
ನೆನೆಯುತಲಿ ಪರಶಿವನ ಚರಣವ ।
ಕನಲಿ ಹೋಮದಿ ಧುಮುಕಿ ತನ್ನನು ।
ನೆನೆವ ಮೇನಾದೇವಿ ಗರ್ಭದಿ ಬೆಳೆದಳಾಕ್ಷಣದಿ ॥ ೩೯ ॥

ಆದುದೈ ಕಳವಳವು ಯೂಗದೊ ।
ಳಾದುದೈ ದಕ್ಷನೊಳು ಕೋಪವ ।
ವಾದುದೈ ಸರ್ವರಿಗೆ ಘನಭಯವಾಗ ಮಾನಸದಿ ॥
ಪೋದರೈ ನಿಲ್ಲದಲೆ ಪಲಬರು ।
ಪೋದರೈ ಶಪಿಸುತಲಿ ಹಲವರು ।
ಪೋದರೀ ಕೃತಿಸಲ್ಲದೆನುತಲಿ ಪಲವರಾಕ್ಷಣದಿ ॥ ೪೦ ॥

ಕೂಡೆಯುಪ ಶಕುನಂ ಗಳಾದವು ।
ನಾಡೆ ಮುನಿಯುತ ದಕ್ಷ ನಿನ್ನಗೆ ।
ಕೇಡು ತಾನೊದಗಿಹುದು ಕೇಣದಿ ಮನಕೆಬಂದವೊಲು ॥
ಆಡಿ ಕೆಡಿಸಿದೆ ಜನ್ನವನು ನಿನ ।
ಗಾಡಿ ಫಲವೇನೆನುತ ಮುನಿಗಳು ।
ನಾಡಿಗಾಗಲೆ ತೆರಳಿ ಪೋದರು ಕೆಲವರತಿಜವದಿ ॥ ೪೧ ॥

ಕಂಡು ಜವದಲಿ ಬಂದು ನಂದಿಯು ।
ಖಂಡಪರಶುವಿಗರುಹೆ ದೈತ್ಯರ ।
ರುಂಡ ಮಾಲಾಭರಣ ಕೋಪೋದ್ರೇಕನಾಗುತಲಿ ॥
ಕೆಂಡಗಳನುಗುಳುತಲಿ ದಿವಿಜರ ।
ತಂಡದೊಡನೀಪರಿಯ ಗೈದನೆ ।
ಭಂಡ ದಕ್ಷನು ಕಾಣಬಹುದಿನ್ನೆನುತಲುರಿದೆದ್ದ ॥ ೪೨ ॥

ಜಾರಿದುದು ಶಾಂತಿಯುದು ರೌದ್ರವು ।
ಮೀರಿದುದು ಶಿಖಿಸಿಡಿದು ಗಗನಕೆ ।
ಹಾರಿದುದು ಫಣೆಗಣ್ಣಿನಿಂದಲಿ ಕೂಡೆ ಘನಕಿಚ್ಚು ॥
ತೋರಿದುದು ಜಗ ವಿಲಯು ಗೈವೊಲು ।
ಕಾರಿದುದು ಫಣಿವಿತತಿ ವಿಷ ಬಾ ।
ಯಾರಿದುದು ಜಗದಖಿಲ ಜನಗಳಿಗಾಕ್ಷಣಾರ್ಥದಲಿ ॥ ೪೩ ॥

ಕೆಂಡಗಣ್ಣನು ವಿಷಗ್ರೀವ ಪ್ರ ।
ಚಂಡ ದೈವತ ಮುಳಿಯೆ ಜಗಗಳ ।
ದಿಂಡು ಗೆಡಹುವ ಕಾಲದಂತ್ಯದ ರುದ್ರನಾರ್ಭಟಿಸೆ ॥
ಪುಂಡರೀಕ ಭವಾಂಡ ಮಂಡಲ ।
ವಂಡಲೆಯು ಉಡುತಂಡ ಮೊಗೆಯುಲು ।
ಚಂಡಕರ ಮಂಡಲವು ತಳಮುಳಗೊಂಡು ನಡುಗಿದುದು ॥ ೪೪ ॥

ರುದ್ರನಾಮುನು ಕಡೆಯು ಕಾಲದ ।
ರುದ್ರನೊಲು ತಾನಾಗ ತೋರಿದ ।
ರೌದ್ರ ಬಣ್ಣಿಸಲಳವದೇನ್ಸೈ ಸರೀಸೃಪಪತಿಗೆ ॥
ಭದ್ರಕರದಾಕಾರ ಪೋದುದು ।
ಕ್ಷುದ್ರ ದಕ್ಷಾದ್ರಿಯುನು ತಕ್ಷಣ ।
ಛಿದ್ರಿಸುವ ಶತಕೋಟಿಯಂದದೊಳೆಸೆಯಲಾಕ್ಷಣದಿ ॥ ೪೫ ॥

ಫಳಫಳನೆ ನಕ್ಷತ್ರ ಮುದುರಲು ।
ತಳಮುಳನೆ ಜಳಧಿಗಳು ಕುದಿಯುಲು ।
ಛಿಳಿಛಿಳಿಲು ಛಿಟಲೆಂದು ಗಿರಿಗಳು ಸಿಡಿಯಲಾಗಸಕೆ ॥
ಬಳಬಳನೆ ಫಣಿದಿಗ್ಗಜಂಗಳ ।
ತಲೆತಲೆಯು ವರಮುತ್ತು ರತ್ನಗ ।
ಳಿಳೆಗೆ ಸುರಿಯುಲು ನಿಖಿಳ ಲೋಕಗಳುರಿಯುತೊಡಗಿದವು ॥ ೪೬ ॥

ಪೋಳುಪೋಳಾಯ್ತೆಯ್ಯ ಜಾಂಡವು ।
ನೀಲಗಳ ತಾನಿಂದು ಜಗಗಳ ।
ಕಾಳಿಯುಳಿದುರಿಯೊಳಗೆ ಸುಡದಲೆ ಬಿಡಸದೆಂಬಂತೆ ॥
ಪೇಳಲಸದಳ ವೆಸೆವ ಕೋಪ ಛ ।
ಡಾಳಿಸಲಿಕೆ ಮಹೋಗ್ರನಾಗ್ರಹ ।
ಪೇಳಲಳವೇನುರಿಯುು ನಿಂದುದು ನಭೋಪರಿಯಂತ ॥ ೪೭ ॥

ಆ ಮಹಾಜ್ವಾಲೆಯೊಳು ತೋರುವ ।
ಧೂಮವೇ ಘನರೂಪ ತಾಳ್ದುದೊ ।
ಆ ಮಹೀಧರ ನೀಲಗಿರಿ ಈ ಧರಣಿಗಿಳಿದಿಹುದೊ ॥
ಶಾಮವರ್ಣ ಸಹಸ್ರ ವದನದೊ ।
ಳಾನುಹಿತ ದ್ವಿಸಹಸ್ರ ಭುಜದಿಂ ।
ಭೀಮರೂಪವದೊಗೆದುದ್ಭೈ ತ್ರಿಸಹಸ್ರ ನಯನದಲಿ ॥ ೪೮ ॥

ಆವಿರಾಡ್ರೂಪಾಸ್ಯವದು ತಾ ।
ನಾವಿಯುತ್ತಳವನ್ನೆ ಮೀರಿದು ।
ದಾವಿಭಾಕರ ಚಂದ್ರ ಮುಡುಗಣ ಕಂಠಮಾಲೆಯೊಲು ॥
ತಾವು ತೋರಲು ಉಗ್ರರೂಪದಿ ।
ಭೂವಲಯದೊಳು ನಿಂದು ಘರ್ಜಿಸೆ ।
ಶೀವಿ ಘನಶತಕೋಟಿ ಸಿಡಿಲಾರ್ಭಟಿಸುವಂತಾಗೆ ॥ ೪೯ ॥

ಪೊಳೆವ ಫಣಿಭೂಷಣಗಳಿಂದಲಿ ।
ಪಲಕ ಖಡ್ಗವ ಪಿಡಿದು ಹಸ್ತದಿ ।
ಲಲಿತಕೆಂಗಣ್ ಮೀಸೆಕೆಂಪಿನ ಜುಂಜುದಲೆಯಿಂದ ॥
ಮಲೆತ ಸುರನರಭುಜಂಗರುಗಳ ।
ಘಳಿಲನಸುಗೊಂಬುತುಳ ಶೌರ್ಯದ ।
ಕಲಿಗಳಧಿದ್ಭೈವೆರಗಿ ನಿಂದನುಮೇಶನಡಿಗಳಲಿ ॥ ೫೦ ॥

ಸೀಳಲೋ ಭೂಮಂಡಲವ ನಾ ।
ಕೀಳಲೋ ಮಾರ್ತಾಂಡ ಮಂಡಲ ।
ಹೂಳಲೋ ಸಪ್ತಾಬ್ಧಿ ಸಂಚಯ ಸರ್ವಜಗಗಳನು ॥
ಪಾಳುಗೈಯಲೊ ಹರಿಯಜಾದ್ಯರ ।
ಬಾಳದಕ್ಕರ ವಕ್ಕಲಿಕ್ಕಲೊ ।
ಪೇಳು ಪೇಳೆನಗೆನ್ನುತಾರ್ಭಟಿಸಿದನು ವೀರೇಶ ॥ ೫೧ ॥

ನೆಗ್ಗಲೋ ಬ್ರಹ್ಮಾಂಡವಜನನು ।
ನುಗ್ಗುಮಾಡಲೊ ಹರಿಯುತರಿಯಲೊ ।
ಸಗ್ಗದರಸಾದ್ಯಖಿಳ ದಿಕ್ಪಾಲಕರ ಸಿರಿಸುಡಲೊ ॥
ದಿಗ್ಗಜಂಗಳ ಕೋರೆಕೀಳಲೊ ।
ಬಗ್ಗುಬಡಿಯಲೊಫಣಿಯ ಕೂರ್ಮನ ।
ನುಗ್ಗುನುಸಿಯನು ಮಾಡಲೋ ನೀಬೆಸಸು ಬೆಸಸೆಂದ ॥ ೫೨ ॥

ಆರ ಸಂಹಾರವನು ಮಾಡಲಿ ।
ತೋರು ನೀನೀಕ್ಷಣದೊಳೆನ್ನುತ ।
ಘೋರ ರೂಪದಿಘರ್ಜಿಸುವ ಸುತನಾರ್ಭಟಿಕೆ ನಗುತ ॥
ಮೂರು ಜಗವನುಗೆಲ್ಲುವ ಪ್ರತಿ ।
ವೀರನೀನ್ನೈ ಭದ್ರರೂಪನು ।
ವೀರಭದ್ರನು ಯಂಬನಾಮದಿ ಮೆರೆವುದೆಂದೆನುತ ॥ ೫೩ ॥

ಕಿಡಿಗಳುಗುಳುತನಿಂದ ವೀರನ ।
ಕಡುಹು ಕಾಹುರಕಂಡು ಕಳುಹಲು ।
ಹುಡಿಯಗೈಯುದೆ ಬಿಡನು ಕೋಪದಿ ಜಗವನೆಂದೆನುತ ॥
ಮುಡದಿ ಮಣಿನೀಲಾದ್ರಿವರ್ಣದ ।
ಜಡಜಲೋಚನ ಜಡಜವದನೆಯ ।
ನೊಡನೆ ನಿರ್ಮಿಸಿ ಭದ್ರಕಾಳೀಯೆಂದು ಪೆಸರಿಡುತ ॥ ೫೪ ॥

ಭದ್ರಕಾಳೀ ದೇವಿಗೆಯುವರ ।
ಭದ್ರಮೂರುತಿಯಾಗಿ ಯನುಪಮ ।
ರೌದ್ರದಿಂದಿಹ ವೀರಭದ್ರೇಶ್ವರಗೆ ಹರುಷದಲಿ ॥
ರುದ್ರಗಣವರ ಪ್ರಮಥಗಣರಾ ।
ರುದ್ರಕನ್ಯೆಯ ರೊಡನೆ ಕರುಣಸ ।
ಮುದ್ರನಿಗೆ ವೈವಾಹವೆಸಗಿದರತುಲಹರುಷದಲಿ ॥ ೫೫ ॥

ಆದುದ್ದೈ ಸಂತಸವು ಪರಶಿವ ।
ಗಾದುದ್ದೈ ವೀರೇಶ್ವರಗೆ ಮುದ ।
ವಾದುದ್ದೈ ಗಣನಿಕರಕೆಲ್ಲಕೆ ಹರುಷವಾಕ್ಷಣದಿ ॥
ಆದುದ್ದೈ ದಕ್ಷಾಧ್ವರದಿಭಯ ।
ವಾದುದ್ದೈಯರಿವಮರಮುನಿಪತಿ ।
ಗಾದುದ್ದೈ ಮುನಿಗಳಿಗೆ ಕಳವಳ ಮಂತ್ರಘೋಷದಲಿ ॥ ೫೬ ॥

ಬೆಸಸು ಬೆಸಸಿನ್ನಾದರೆಯುುನೀ ।
ನಸಮಲೋಚನ ನಾವನಜ್ಞದಿ ।
ಮಿಸುಪ ನಿಮ್ಮಾಯನು ಪಮಾಜ್ಞೆಯ ಮೀರಿವರ್ತಿಸುವ ।
ಕುಸುರಿದರಿದವನಖಿಲಬಲವನು ।
ಸಸಿನದಿಂಪಿಡಿತಂದು ತವಪದ ।
ಬಿಸಜಗಳಿಗರ್ಪಿಸುವೆ ನೋಡೆಂದೆಂಬವೀರಂಗೆ ॥ ೫೭ ॥

ಕೇಳುನಂದನ ದಕ್ಷನೆಂಬವ ।
ಕಾಳು ಮತಿಯಿಂದೆಮ್ಮ ನನುದಿನ ।
ಓಲಗಿಪ ಹರಿಯಜಾದ್ಯರ ಮೇಳದೊಡಗೂಡಿ ॥
ಪೇಳಲೇ ನಧ್ವರವನೆಸಗಿಹ ।
ಕಾಳಿಮುಡಿದಳು ಪೋಗಿಬುದ್ಧಿಯ ।
ಪೇಳು ನೀನೆಮ್ಮಗ್ರ ಭಾಗವ ನೀಯದೊಡೆಜವದಿ ॥ ೫೮ ॥

ಕೋಟಗೊಂಬತ ಲವನ ಯಜ್ಞವ ।
ಪಾಳುಗೈವುತ ಸರ್ವದಿವಿಜರ ।
ಮೇಳದಿಂಪಿಡಿತಪುದು ಯುವ್ಮಯ ಪಾದತಳಕೆನಲು ॥
ಕೇಳುತಲಿ ಘನರೋಷವಾರ್ಧಿಯೊ ।
ಳಾಳುತಲಿ ಪರಶಿವನನುಜ್ಞೆಯು ।
ತಾಳುತಲಿ ಘರ್ಜಿಸುತಲೈದಿದ ವೀರಭದ್ರೇಶ ॥೩೯ ॥

ಘುಡುಘುಡಿಪ ಘನಘರ್ಜನೆಗೆ ತಾ ।
ನಡುಗಿದುದು ತ್ರೈಜಗವದುಡುಗಣ ।
ವೊಡನೆ ಪೊಡವಿಗೆಸಿಡಿಯ ಲದ್ರಿಗಳುರುಳಿದವು ಜವದಿ ॥
ತಡೆಯುದಲೆಪದಹತಿಗೆ ಕೂರ್ಮನು ।
ಕೆಡೆಯೆದಿಗ್ಗಜ ಮೊದರಲಹಿ ಪತಿ ।
ನಡುಗುತಲಿ ಶಿರಬಾಗಿ ನಿಂದನು ಬಹಳ ಭೀತಿಯುಲಿ ॥ ೩೦ ॥

ಪೇಳಲೇ ನೀಸಿಂಹಘರ್ಜನೆ ।
ಕೇಳುತಲಿ ಹರಿಯಜ ಸುರೇಂದ್ರರು ।
ಕೋಳು ಹೋದರು ಹೃದಯದೊಳಗಳವಳಿದ ಖಳಪಕ್ಷ ॥
ತಾಳದಲೆ ಬೆದರಿದರು ಮುನಿಗಳು ।
ಶೂಲಪಾಣಿಯು ಲೀಲೆಯನುತಲಿ ।
ಕಾಳು ಮತಿಯಾಯ್ತೆನುತ ಲೆಲ್ಲರು ಕಂಪಿಸಿದರಂದು ॥ ೩೧ ॥

ಭದ್ರಕಾಳೀ ಸಹಿತ ನಡೆಯುತ ।
ರೌದ್ರದಿಂ ಹೊಂಕರಿಸೆ ವೀರನು ।
ರುದ್ರಗಣ ತಾಪುಟ್ಟಿ ತೆಗಣಿತ ತನ್ನ ರೂಪದಲಿ ॥
ಅದ್ರಿಗಳ ಚಂಡಿನೊಲು ತೂರುತ ।
ಕ್ಷುದ್ರದಕ್ಷನ ಯಾಗವೆಂಬಸ ।
ಮುದ್ರಪೀರುವ ಕುಂಭ ಸಂಭವ ನಂದದಿಂನೆಡೆದ ॥ ೩೨ ॥

ನಡೆದುವಾ ವೀರೇಶನೊಡನೆಯು ।
ಪಡೆಯುದಗಣಿತ ಭುಜಪರಾಕ್ರಮು ।
ಕಡುಹು ಸಾಹುರ ವೀರಶೌರ್ಯೋತ್ಸಾಹ ಧೈರ್ಯದಲಿ ।
ಪೊಡವಿ ಯೊಳಗೆದುರಾಂತು ನಿಲ್ಲುವ ।
ಧೃಡ ಪರಾಕ್ರಮುರರಸಲರಿಯುದ ।
ಮೃಡಗಣವದತಿಶಯುದ ಕೋಪಾಟೋಪದಿಂದಾಗ ॥ ೭೩ ॥

ಧರೆನಭವ ಕೈತಾಳವಿಕ್ಕುವ ।
ಧರಣಿಧರಗಳ ಚಂಡನಾಡುವ ।
ಶರಧಿಗಳ ಸುರ್‍ರಿಂದು ಸುರಿಯುುವ ರುದ್ರಗಣವಮಿತ ॥
ಧರಣಿಯುಗಲದಿ ನೆರೆದು ನಡೆದುದು ।
ಧುರದೊಳ ಪ್ರತಿವೀರರಗ್ರಣಿ ।
ವರದ ವೀರೇಶ್ವರನ ನೆರವಿಯೊಳಾರ್ದು ಘರ್ಜಿಸುತ ॥ ೭೪ ॥

ಪ್ರೇತಪತಿಯುನು ಭೀತಿಗೊಳಿಸುತ ।
ಪೂತಯುತಿ ಪತಿಗಳನು ಘಾತಿಸು ।
ಜೋತು ಮೂಜಗಗಳನು ಭಂಜಿಸುತಂಜಿಸುತಲಿರುವ ॥
ಭೂತಗಣ ವದುಭುತವ ಬೀರುತ ।
ಖ್ಯಾತವೀರೇಶ್ವರನ ಬೆಂಬಿಡಿ ।
ದಾತು ತೆರಳಿತು ಗಣನೆಯಿಲ್ಲದೆ ಕೂಡೆಬೊಬ್ಬಿಡುತ ॥ ೭೫ ॥

ಕರೆದು ಸೈನ್ಯದೊಳೋರ್ವ ಗಣಪನ ।
ಭರದಿ ಪೇಳ್ವುದು ಪೋಗಿ ದಕ್ಷಗೆ ।
ಮುರುಳೆಯುಮ್ಮಯು ರುದ್ರಭಾಗವನಿತ್ತು ಬಾಳೆನುತ ॥
ಮರಳಿಬಂದರುಹುವುದುಯುಮ್ಮಯು ।
ಬರವಪೇಳದಿರೆನುತ ಕಳುಹಲು ।
ತೆರಳಿಯೂ ದಕ್ಷನನುಕಾಣುತ ಲಿಂತುಪೇಳಿದವು ॥ ೭೬ ॥

ಕೇಳುನೀ ಖಳದಕ್ಷಸಿಂಗವ ।
ಕೀಳುನರಿಕೆಣಕಿದೊಲುನಿನ್ನಯು ।
ಬಾಳುವೆಯುತಾನಾಯ್ತು ಹರನೊಳುವೈರಗೊಂಡುಳಿವ ॥
ಆಳುತನ ವೀರೇಳುಜಗವೊಳು ।
ಕೇಳಿ ಕಂಡವರಿಲ್ಲವೆಂಬಲಿ ।
ಕಾಳುಮತಿನಿನಗಿಡನು ಪೇಳಿದಜಾಣಶಾರವರು ॥ ೩೭ ॥

ಅರಸೊಲಿಸಲು ಯಜ್ಞಗೈವರು ।
ಆರಮಂತ್ರದಿಹವಿಯು ನೀವರು ।
ಆರನಾಮವ ಮುಬದಿನುತಿಪವು ಸತತಶೃತಿನಿಚಯು ॥
ಆರಬಲದಿಂದಿಹರು ನಿನ್ನೀ ।
ವಾರಿಜಾಂಬಕ ವಿಧಿಸುರೇಶರು ।
ಆರನೇಮದೊ ಳಿಳಿವುಕೈಜಗಕಿಹುದು ತಿಳಿಯುಸಲು ॥ ೩೮ ॥

ಕೇಳಿಕಿಡಿಕಿಡಿಯಾಗಿ ದಕ್ಷನು ।
ಖೂಳಘಡ ನೀನಾರುನಿನಗಿದ ।
ಪೇಳಿದವರಾ ರೇಕೆಗಳಹುವೆ ಬಂದಹದನೇನು ॥
ಪೇಳುನೀನೆನು ತೆಲ್ಲರಾಡಲು ।
ಕೇಳಿರೈ ನಿಮ್ಮೊಡೆಯುನೆನಿಪಾ ।
ಭಾಳನೇತ್ರನ ಲೆಂಕಶಿವಪೂತೆಂಬ ನಾಮೆನಗೆ ॥ ೩೯ ॥

ದೇವಕಳುಹಲು ಬಂದೆನೈ ನಾ ।
ನೀವುದೆಮ್ಮಯು ರುದ್ರಭಾಗೆನೆ ।
ದೇವನಾವನು ಭಾಗವಾವುದು ನೂಂಕಿರಿವನೆನೆಲು ॥
ಸೇವಕರು ಬರೆಕರಗಳರಿಯುತ ।
ಲಾವಿಗಡರೆಲ್ಲರನು ಗೆಲ್ಲುತ ।
ಪಾವಕಾಪ್ತನ ಗತಿಯೊಳ್ಳೈದಿದ ಪೇಳ್ದನೊಡೆಯುಂಗೆ ॥ ೪೦ ॥

ಹದನವರುಪಲು ಕೇಳಿವೀರನು ।
ಹೆದೆಯುನೇರಿಸಿ ಧನುವಸೆಳೆಯಲು ।
ಬೆದರಿದರು ದನಿಗೇಳಿ ದಕ್ಷನಯಾಗರಕ್ಷಕರು ॥
ಕದನಕರ್ಕಶಬರಲು ದಿಗಧಿಪ ।
ರೊದಗಿ ಶೌರ್ಯಾದಿಬರಲು ಸಮರಕೆ ।
ಸದೆಯೆ ನಿಲ್ಲದಲೋಡಿದರು ತಾವ್‌ಕಂಡಕಡೆಗಾಗ ॥ ೨೧ ॥

ಕಂಡುತಾ ಗೋವಿಂದ ಬಂದಾ ।
ಖಂಡಲಾದ್ಯರೆ ಪೋಗದಿರಿ ಭಯ ।
ಗೊಂಡು ಬನ್ನಿರಿನಾನಿಹೆನು ನೀವೆನುತ ಲುರವಣಿಸೆ ॥
ಕೆಂಡಗಳ ನುಗುಳುತಲಿ ಬಂದಾ ।
ಗಂಡುಗಲಿ ವೀರೇಶನೆಸೆವ ಪ್ರ ।
ಚಂಡ ಶರಘಾತದಲಿ ನಿಲ್ಲದಲೋಡಿತಮರಚಯ ॥ ೨೨ ॥

ನೋಡಿತಾ ಬಿಡುಗಣ್ಣರೊಡೆಯನು ।
ಕೂಡೆಕೂಗುತ ಕರೆಯುತೆಲ್ಲರಿ ।
ಗಾಡಿದನು ನೀವೆಲ್ಲರಡಿಗಡಿ ಗೋಡಿದರೆಸವನ ॥
ರೂಢಿಯೊಳು ತಾನೆಂತುನಡೆವುದು ।
ನಾಡೆ ದೀಕ್ಷಿತನೆಂತುಗೆಲ್ವಪ ।
ನೋಡುವದುಘರವಲ್ಲವೆನ್ನುತಲಾಂತ ಕೋಪದಲಿ ॥ ೨೩ ॥

ಸರಳಮಳೆಗರೆಯುತಲಿ ಫಿಲಲದ ।
ನರಿಯುತಾಶಾಧೀಶರೆಲ್ಲರು ॥
ನೆರೆದು ಸುರಿಸಿದ ರಸಮ ಕಣೆಗಳನಾಗಶೌರ್ಯದಲಿ ॥
ತರಿದವರ ಶರಗಳನು ವೀರನು ।
ಭರದೆ ಕೂರಲಗೆಸೆಯಲಾಕ್ಷಣ ।
ಮರೆರೆನಭದೆಡೆಗೊಯ್ದು ಬಿಸುಡಿತು ರಸೆಗೆದಿಗಧಿಪರ ॥ ೨೪ ॥

ಒಡನೆ ಬೊಬ್ಬೆಯನಿಡುತ ಪೊಸರಥ ।
ವಡರಿ ಘುಡುಘುಡಿಸುತ್ತವ್ಯಾಘ್ರವ ।
ಬಡನರಿಗಳೊಡಗೂಡಿ ತಡೆವವೊಲಾಂತುಕಣೆಗರೆಯೆ ॥
ಕಡಿದವನು ದಿವ್ಯಾಸ್ತ್ರಸಂಚಯ ।
ದಿಡಲು ತಡೆಯದ ಲೋಡಿದರುಜಗ ।
ದೊಡೆಯನಾತ್ಮಜ ನೆಸುಗೆಯಿಂದಳವಳಿಯು ತಾಕ್ಷಣದಿ ॥ ೭೫ ॥

ಆರು ಯದುರಾಂತೀಗ ನಿಲ್ಲುವ ।
ವೀರರೀ ಕಾರ್ಮುಗಿಲಿ ನಂದದಿ ।
ತೋರುವಪ್ರತಿ ಶೌರ್ಯಧೈರ್ಯೋತ್ಸಾಹನಿದಿರಿನಲಿ ॥
ವಾರಿರುಹಭವ ನೆತ್ತಪೋದನು ।
ವಾರಿಜಾಂಬಕ ನೆಲ್ಲಿಸರಿದನು ।
ಆರಿಗಿದನರುಹುವುದು ತಾವೆಂದೆನುತ ಲೋಡಿದರು ॥ ೭೬ ॥

ನೋಡಿದನು ಲೋಕೇಶ ನಿರ್ಜರ ।
ರೋಡುವದು ಕೆಂಪಡರೆಕಂಗಳು ।
ಮೂಡಿಗೆಗೆಕ್ಕೆನೀಡಿ ಚಾಪವನೇರಿಸುತಲಾಗ ॥
ಗಾಡಿಕಾರನದೆಲ್ಲಿ ತೋರಿರಿ ।
ಕಾಡಬಂದನೆ ನಮ್ಮನೆನುತಲಿ ।
ಕಾಡುಮಿಕದಂದದಲಿ ಬಂದನುವೀರನಿದ್ದೆಡೆಗೆ ॥ ೭೭ ॥

ಆರುನೀನೆಲೆವೀರ ನಮ್ಮಯ ।
ಪಾರ ಸೇನೆಯನೇಕೆ ಹತಗೈ ।
ದಾರು ನಿನ್ನನುಕಳುಹಿದರು ಹದನೇನು ಪೇಳೆನಲು ॥
ಆರು ನಿನಗೀಜಗವ ಸೃಜಿಸಿಧ ।
ಕಾರ ವಿತ್ತ ರಹಂಕರಿಸೆ ಶಿರ ।
ವಾರು ತರಿದರು ಮರದೆಯಾ ನೀಜಡಜಭವ ನೆನಲು ॥ ೭೮ ॥

ಧೀರನಹುದೈ ನೀನು ನಮ್ಮಗ ।
ದಾರು ಸೃಷ್ಟ್ಯಧಿಕಾರ ನಿತ್ತರು ।
ತೋರು ನಿನ್ನಯಶೌರ್ಯವೆಂದಜ ಸರಳಮಳೆಗರೆಯೆ ॥
ಶೂರನಹುದಹುದೆನುತ ವೀರನು ।
ಕೂರಲಗು ಶಳೆದಿಡಲು ಬ್ರಹ್ಮನ ।
ಸಾರಥಿ ರಥಾಶ್ವವೆಲ್ಲವ ತರಿದವನ ನಭಕೊಯ್ಯ್ದು ॥ ೭೯ ॥

ಸುತ್ತುತಿಲ್ಲಾ ದೆಶೆದೆಶೆಗಳನು ।
ಸುತ್ತುತಲಿ ಕೆಡಹಲ್ಕೆ ಧರಣಿಗೆ ।
ಮತ್ತೆ ಪುಟಚಂಡಿನೊಲು ಹಾರುತಪತ್ತಿಪೊಸರಥವ ॥
ಚಿತ್ತದೊಳು ಖತಿವೆತ್ತು ತಾ ಮುಸೆ ।
ವೆತ್ತ ಕೂರಂಬುಗಳ ನೆಸೆಯಲು ।
ಕತ್ತರಿಸಿ ಘಾತಿಸಿದ ನಡಿಗಡಿಗವನ ರಥಕಡಿದು ॥ ೮೦ ॥

ಈವಿಧದಿ ವಿಧಿ ಪರಿಭವದೊಳಿರ ।
ಲಾ ವಿಬುಧರುರವಣಿಸ ಲತ್ತಲು ।
ದೇವಿಕೊಂದಳು ಭದ್ರಕಾಳಿಯು ಬಲವದಗಣಿತವ ॥
ಹೇವರಿಸದಲೆ ಭೂತಗಣವದು ।
ಶೀವಿತಿನುತಿರೆ ಕಂಡುಕೋಪದೊ ।
ಳಾ ವಿರಂಚಿಯು ಬಿಟ್ಟನೈಬ್ರಹ್ಮಾಸ್ತ್ರವಾಕ್ಷಣದಿ ॥ ೮೧ ॥

ಕಿಡಿಗಳುಗುಳುತ ಗಿರಿಗಳೊಡೆಯುತ ।
ಸುಡುತಪೊಡವಿಯ ನುಡುಗಣವತಾ ।
ಕೆಡಪುತಲಿ ಬರುತಿರ್ಪಬ್ರಹ್ಮಾಸ್ತ್ರವನು ಕಾಣುತಲಿ ॥
ತಡೆಯುದಲೆ ರುದ್ರಾಸ್ತ್ರದಿಂದಿಡು ।
ತೊಡನೆಭೂಮಿಗೆಕೆಡಹಿ ವಿಧಿಯನು ।
ಬಿಡದೆ ಪೆದೆಗುಡಿಕಟ್ಟಿ ಭೂತಾಳಿಗಳವಶಕಿತ್ತು ॥ ೮೨ ॥

ಕಡಿಮು ಸುರಪನತೋಳ್ಗಳನು ಜವ ।
ದುಡಿಪು ಪೂಷನಪಲ್ಗಳನು ತಾ ।
ಕೆಡೆದುಭಗನೇತ್ರೇಳು ಪೋಳ್ಗೈದಗ್ನಿಜಿಹ್ವೆಯನು ॥
ಒಡನೆ ಚಂದ್ರನ ನೊರಸಿ ಮನುಮುನಿ ।
ಗಡಣ ವಸುದಿಕ್ಪಾಲ ಗ್ರಹಗಳ ।
ಜಡಿದು ಕೊಂಡಸು ಕುರುಹನವರವರಂಗಗಳಲಾಗ ॥ ೪೩ ॥

ಕೇಳಿ ಮಾಧವ ಮೌನವನು ತಾ ।
ತಾಳಿ ಘನದುಃಖಾಬ್ಧಿಯೊಳು ಮುಳು ।
ಗೇಳಿ ಚಿಂತಿಸಿಫಲವದಿನ್ನೇ ನೆನುತಧೃತಿತಾಳಿ ॥
ಏಳಿಕ್ಕೆ ಸುಭಟಾದಿಗಳೆ ಬರ ।
ಹೇಳಿ ಪಟುಭಟರೆಲ್ಲದಿವಿಜರ ।
ಸೀಳುವೆನು ರಿಪುಬಲವ ನೆಂದೆನ್ನುತಲಿ ಹರಿನಡೆದ ॥ ೪೪ ॥

ಕಡಿದ ಕಾಲ್ಗಳನುಡಿದ ತೋಳ್ಗಳ ।
ಬಿಡುವ ಕಂಗಳ ನೊಡೆದಶಿರಗಳ ।
ನೊಡನೆ ಬಸಿಯುವ ನೆತ್ತರಿನ ಪೊಡೆಯುಡಿದ ಪಲ್ಗಳಲಿ ॥
ನುಡಿಯು ಬಾರದ ಬಾಯ್ಗಳಿಂದಲಿ ।
ಬಡಬಡಿಪ ಬಿಡುಗಣ್ಣರಂಗಗ ।
ಳೊಡನೆ ಕಡುದುಃಖಿಸುವರಾರ್ತ ಧ್ವನಿಯು ಕೇಳುತಿರೆ ॥ ೪೫ ॥

ಮುದುವೆ ನಿಬ್ಬಣಗಳನು ಗೈವುತ ।
ಲೊದವಿಯೋಕುಳಿಯಾಟ ವಾಡುತ ।
ಪದಪಿನಿಂದಲಿ ಮಜ್ಜಮಾಂಸಾದಿಗಳ ಸೇವಿಸುತ ॥
ಇದುವೆ ಯಮುಗತಿಶಯ ಸು ಸಮಯವ ।
ದೊದಗಿಹುದು ಯೆಂದೆನುತ ಕುಣಿಯುತ ।
ಮುದದಿ ಹಾಸ್ಯವಗೈವ ಮರುಳುಗಳಿರ್ದವಾ ರಣದಿ ॥ ೪೬ ॥

ಕಂಡ ರಣಮಂಡಲದಿ ಕೆಡೆದಿಹ ।
ರುಂಡಮುಂಡಗಳನ್ನು ಕುಣಿಯುವ ॥
ಥಂಡಥಂಡದ ಮರುಳುಗಳ ನಾಪುಂಡರೀಕಾಕ್ಷ ॥
ಕೆಂಡದಂಡದೊಳಾಗತಾಖತಿ ।
ಗೊಂಡುಬಾಣದ ಮಳೆಯು ಸುರಿಸಿದ ।
ಚಂಡಕಿರಣನ ಮಂಡಲವು ತಾ ಕಾಣದಂದದಲಿ ॥ ೮೭ ॥

ಆಶರದ ಘಾತದಲಿ ಬಲವದು ।
ನಾಶವಾಗಲು ಕಂಡುಕೋಪದೊ ।
ಳೀಶಪುತ್ರನು ಧನುವನೇರಿಸುತೈದಿ ಹರಿಯೆಡೆಗೆ ॥
ಲೇಸುಲೇಸ್ಸೆ ಯಧಟರಗ್ರಣಿ ।
ಈಸುರೌಘದೊಳಸಮನೀನೆನು ।
ತಾಸರಳ ಸುರಿವಳೆಯು ತಾಕಡಿದೆಸೆದ ಕೂರ್ಗಣೆಯು ॥ ೮೮ ॥

ಸ್ಯಂದನವ ದಾಗಸಕೆ ಪೋಗಲಿ ।
ಕಂಡು ನೆಗೆದಿನ್ನೊಂದನಡರುತ ।
ಬಂದುಕೂರಲಗೆಸೆದು ಭಾಪುರೆ ವೀರನಿಲ್ಲೆನಲು ॥
ಮಂದಹಾಸದಿ ಕಡಿದು ಕಣೆಗಳ ।
ನಂದು ಕೂರ್ಗಣೆಯಿಂದ ಘಣೆಗಿಡೆ ।
ನೊಂದು ಮೂರ್ಛಿತನಾಗಿ ಬೀಳ್ದನು ನೀಲಗಿರಿಯಂತೆ ॥ ೮೯ ॥

ನೋಡಿ ಮರುಗಿದ ವೀರಮನದೊಳ ।
ಗಾಡಲೇ ನೆಲ್ಬತ್ತು ಶೌರಿಯು ।
ಪೂಡಿಕೋಪದಿ ವೈಷ್ಣವಾಸ್ತ್ರವನೆಚ್ಚು ಬೊಬ್ಬಿರಿಯೆ ॥
ಕೂಡೆರುದ್ರಾಸ್ತ್ರದೊಳು ಖಂಡಿಸು ।
ತಾಡಿದನು ಮರ್ಝುಭಾಪುವೀರನೆ ।
ನೋಡುತೋರ್ಕೈ ನಿನ್ನಶೌರ್ಯವದೆನುತ ಲಿಂತೆಂಪ ॥ ೯೦ ॥

ವೀರನೀ ಸಾರ್ನಿನ್ನ ಪೆಸರೇ ।
ಪಾರು ನಿನ್ನನು ಪೆತ್ತಮಹಿಮರು ।
ಧೀರ ನಿನ್ನಸಮಾನರನು ನಾನರಿಯೆನೆಂದೆನಲು ॥
ಆರು ನಿನ್ನಗೆವಿಧಿಗೆ ಜನಕನ ।
ದಾರು ತ್ರೈಜಗದೊಡೆಯ ನೆನಿಸುವ ।
ಕಾರಣಿಕ ನುಮೆಯರಸನಾತನೆ ಯನ್ನಪಿತನು ತಿಳಿ ॥ ೯೧ ॥

ವೀರಭದ್ರನು ಎಂಬರೆನ್ನನು ।
ಧೀರಕೇಳೆಂದನಲು ಕೋಪದಿ ।
ಶೂರದನುಜಾಂತಕನು ಎಂಬುವರೆನ್ನ ಕೇಳಿನ್ನು ॥
ತೋರುವೀ ಜಗವನ್ನೆ ಪೆತ್ತೆನು ।
ವಾರಿಜೋದ್ಭವ ನೆನ್ನತನಯನು ।
ಧೀರನಿನ್ನಯ ಪಿತನು ವಿಧಿಯಾತ್ಮಜನು ಕೇಳೆನಲು ॥ ೯೨ ॥

ಬಲ್ಲೆ ಸೃಜಿಯಿಪುದಜನಗಿತ್ತುದ ।
ಬಲ್ಲೆ ನಿನ್ನಗೆ ಪೊರೆವುದಿತ್ತುದ ।
ಬಲ್ಲೆರುದ್ರಗೆ ಲಯವನಿತ್ತುದ ನಿಮ್ಮಗಳಿಗೆಲ್ಲ ॥
ಬಲ್ಲಿದನು ತಾನೆನಿಸುತೆಲ್ಲರ ।
ನಿಲ್ಲದಲೆಲಯ ಗೈದುಸೃಜಿಯಿಸ ।
ಬಲ್ಲ ಮಹಿಮನದಾರು ಮರದೆಯ ಗರ್ವದಿಂ ನೀನು ॥ ೯೩ ॥

ಬಗೆಯಲಿಕೆ ನೀ ಪ್ರಕೃತಿ ರೂಪನು ।
ಬಗೆಯೆ ಪುರುಷನು ರುದ್ರತಿಳಿಯೈ ।
ಸೊಗಸಿದೀರ್ವರ ಸಂಗದಿಂದಲಿ ಜನಿಸಿದನು ಬ್ರಹ್ಮ ॥
ಜಗದ ಸೃಷ್ಟಿಗೆ ಪಥವತೋರಲು ।
ಬಗೆದು ಜಾನಿಸೆಶಿವನು ತನ್ನಯ ।
ಮೊಗದೊಳುದ್ಭವನಾಗಿ ಬೋಧೆಯಗೈದನೀ ತಿಳಿಯೈ ॥ ೯೪ ॥

ನೊಸಲಿನೊಳ್ ಮನವಿಟ್ಟು ಜಾನಿಸ ।
ಲೊಸೆದು ತೋರಿದನಲ್ಲಿ ತಿಳಿಯೈ ।
ನೊಸಲು ಗುದಯೋನಿಗಳ ತೆರದೊಳು ನಿಂದಕಾಸ್ಪದನೆ ॥
ಒಸೆದು ನೀನಾವಿಧಿಯ ಗುದದಿಂ ।
ದಸವಸದಿ ಪುಟ್ಟಿರ್ಪಕಾರಣ ।
ಪೆಸರ ಧೋಕ್ಷಜನೆಂದು ನಿನಗಾಗಿರ್ದುದನುಮುರವಿ ॥ ೯೫ ॥

ನಿನ್ನಸುತನೆಂದೆನಿಪ ಬೊಮ್ಮನ ।
ಮುನ್ನ ಶಿರವನು ತರಿದಶಿವನದ ।
ನಿನ್ನು ಸೃಜಿಯಿಸುದಿರುವೆ ನೀನೇಕಿಂದು ಪರಿಯಂತ ॥
ನಿನ್ನ ರಕ್ಷಣೆಯಾಧಿಕಾರವ ।
ದಿನ್ನುಪೇಳ್ ತಾನೆತ್ತಪೋದುದ ।
ದಿನ್ನು ಸಾಕೈದಕ್ಷನನು ನೀನುಳಿಪುದೀಗೆನುತ ॥ ೯೬ ॥

ಅಸಮಶರಗಳ ಸುರಿಸೆ ವೀರನ ।
ಘಸಣೆಗಾರದೆ ಕುಸುಮಶರಪಿತ ।
ನೊಸೆದು ಪೊಸಮಸೆವೆತ್ತ ವಿಶಿಖಂಗಳನು ತವಕದಲಿ ॥
ರಸೆಯೊಳಗೆ ದಿಶೆನಭಗಳರಿಯು ।
ಲ್ಕೊಶವದೆನಿಸದತೆರದಿಸುರಿಸಲು ।
ಕುಸುರಿದರಿಯುಲು ವೀರಹರಿತಾನೆಸೆದ ಚಕ್ರವನು ॥ ೯೭ ॥

ಗಂಡುಗಲಿ ನೋಡೀ ಮಹಾಲು ।
ದ್ದಂಡ ಚಕ್ರಕೆನಿಂದೆಯಾದಡೆ ।
ಖಂಡಪರಶುವಿ ನಣುಗನೀಸ್ ಪರದೈವ ಸಹಜವೆನೆ ॥
ಚಂಡವಿಕ್ರಮ ನಗುತನುಡಿದ ನು ।
ಚಂಡ ಬಲನೀ ಭಾಪುಭಾಪುರೆ ।
ಪುಂಡರೀಕಾಂಬಕನೆ ನೀನುದ್ದಂಡ ನಿಹೆಯೆಂದು ॥ ೯೮ ॥

ಕೆಂಡವುಗುಳುತ ಬರೆ ಸುದರ್ಶನ ।
ಚಂಡಕರ ಮಂಡಲವ ದಡುರಲು ।
ಪುಂಡರೀಕ ಭವಾಂಡ ಕಂಪಿಸಲುಡುಗಣಮುಡುರೆ ॥
ಕಂಡು ವೀರನು ಮಧ್ಯಮಾರ್ಗದಿ ।
ತುಂಡರಿಸಿ ರಥರಥಿಕಹಯಗಳ ।
ದಿಂಡುಗೆಡಹಲು ಭಯದಿ ನಡುಗಿದ ಪುಂಡರೀಕಾಕ್ಷ ॥ ೯೯ ॥

ಲೇಸು ಲೇಸೈ ವೀರರಗ್ರಣಿ ।
ವಾಶಿಪಂಥವು ಸಲ್ವುದೈನಿನ ।
ಗೀಸಮರವೇಸರದು ನಿನ್ನೀಯಸಮಸಾಹಸಕೆ ॥
ಘಾಸೆಗೊಂಡೆವು ನಾವು ನೀಜಗ ।
ಧೀಶನೆಂಬುದನರಿಯದಲೆ ಕೈ ।
ವೀಶಿಕೆಟ್ಟೆವು ಪೊರೆವುದೆಂದೆಸೆದಸಮಶರ ನಗುತ ॥ ೧೦೦ ॥

ತುಂಗವಿಕ್ರಮನೀತ ನೆನ್ನನು ।
ಭಂಗಗೊಳಿಸದೆ ಬಿಡನು ನಿಲಿಸನು ।
ಶಾಂಗಣದಿ ನಾನೆಂತುಗೆಲ್ದಪೆನಸಮ ಭುಜಬಲನ ॥
ಕಂಗಳತ್ರಯತನಯ ರಿಪುಮಾ ।
ತಂಗ ಹರ್ಯಕ್ಷನೊಳು ಘನವಹ ।
ಸಂಗರವು ತಾನಾರ್ಗೆಸಲ್ವುದು ಮೂಜಗದೊಳೆನುತ ॥ ೧೦೧ ॥

ನಿಲ್ಲಲಾರದಲೋಡಿದನು ತಾ ।
ಫುಲ್ಲೆಯೂಕಾರದಲಿ ಕಂಡದ ।
ಚಲ್ಲಿ ಬಡಿದನು ಅರ್ಧಚಂದ್ರಾಸ್ತ್ರದಲಿ ವೀರೇಶ ॥
ತಲ್ಲಣಿಸಿ ಹರಿಮುಗಿದು ಕರಗಳ ।
ಬಲ್ಲಿದನೆ ಪಾಲಿಸುವುದೆನುತಲಿ ।
ಸಲ್ಲಲಿತ ಸಾಹಸ್ರನಾಮದಿ ನುತಿಸಿದನು ಜವದಿ ॥ ೧೦೨ ॥

ವೀರ ಜಯಜಯ ಭಕ್ತಜನ ಮಂ ।
ದಾರ ಜಯಜಯ ವೈರಿವಿಟಪಿ ಕು ।
ಠಾರ ಜಯಜಯ ನಂಬಿದವರಘತಿಮಿರ ಮಾರ್ತಂಡ ॥
ವೀರಭದ್ರೇಶ್ವರನೆ ನಿಮ್ಮಯ ।
ಪಾರ ಮಹಿಮೆಯ ಬಣ್ಣಿಸಲು ಅಂ ।
ಗೀರಸಾಹೀಶ್ವರರಿಗರಿದೈ ಪಾಲಿಸುವುದೆನ್ನ ॥ ೧೦೩ ॥

ರಕ್ಷಿಸೈ ಸಾಹಸ್ರವದನನೆ ।
ರಕ್ಷಿಸೈ ದ್ವಿಸಹಸ್ರ ಹಸ್ತನೆ ।
ರಕ್ಷಿಸೈ ತ್ರಿಸಹಸ್ರ ನಯನನೆ ಕೃಪಾಕಟಾಕ್ಷದಲಿ ॥
ಈಕ್ಷಿಸೈ ನೀ ದಯದೊಳಿನ್ನನು ।
ಪೇಕ್ಷೆಗೈಯದೆ ನಂಬಿಧೆನು ಥಾ ।
ಲಾಕ್ಷನಾತ್ಮಜ ಭದ್ರಕಾಳೀಪತಿಯೆ ಪಾಲಿಪುದು ॥ ೧೦೪ ॥

ಎಂದು ಪಲವಿಧದಿಂದ ನುತಿಸುತ್ತ ।
ನಿಂದ ಗೋವಿಂದನಿಗೆ ಪೇಳ್ದನು ।
ಕುಂದುನಿಂದೆಗಳಪ್ಪವದು ತಾ ಸಹಜಧರಣಿಯಲಿ ॥
ಸಂದೆಗವ ಬಿಡು ದಕ್ಷನಧ್ವರ ।
ಕಿಂದುನಡೆ ನಾವ್ ಬಪ್ಪೆವೆನ್ನಲಿ ।
ಕೆಂದ ಕೇಶವ ಭಕ್ತಿಭಾವದಿ ಮುಗಿದು ಕರಗಳನು ॥ ೧೦೫ ॥

ಪರಮಪುರುಷನೆ ಹರುಷದಿಂದೀ ।
ಪರಿಣತೃಪ್ತಿಯ ಪಡೆಸು ನೀನೆನೆ ।
ನಿರುತ ಜಪತಪಹೋಮಯಜ್ಞಾದಿಗಳು ಗೈಯುವಲಿ ॥
ಪರಮ ಭಕುತಿಯೊಳಾಸನವ ತಾ ।
ವಿರದೆ ಗೈಪವರಘವು ಪೋಪುದು ।
ನಿರುತ ವೀ ತಿಳಿಯೆನುತಲಾಶೀರ್ವದಿಸಿದನು ಹರಿಗೆ ॥ ೧೦೬ ॥

ಕೇಳ್ದನಿದ ನಾದಕ್ಷ ಮನದೊಳ ।
ಗಾಳ್ದ ಕೋಪಾಟೋಪ ತವಕದಿ ।
ಪೇಳ್ದನತಿಬಲರೆನಿಪ ರಕ್ಕಸರೆಲ್ಲರನು ಕರೆದು ॥
ಕೇಳ್ದಿರೇನೈ ಬೂದಿಬಡುಕನು ।
ತಾಳ್ದ ವೈರವ ಕಳುಹಲೋರ್ವನು ।
ತೂಳ್ದನೆಮ್ಮತಿಬಲವ ಪೋಗಿರಿ ರಣಕೆನೀವೆನಲು ॥ ೧೦೭ ॥

ಶರಭ ತಾರಕ ಮಹಿಷ ಶುಂಭನು ।
ದುರುಳ ದುಂದುಭಿ ಹಯಗ್ರೀವನು ।
ವರಮಹಾಬಲ ವಜ್ರನಾಭನು ಶಂಖುಶಿರನಮ್ಮುಚಿ ॥
ದುರುಳ ವೃಷಪರ್ವಾದಿ ದನುಜರು ।
ಸುರಿದು ಶರವಳೆ ವೀರಭದ್ರನ ।
ಸರಳಘಾತಕೆ ನಿಲ್ಲದೋಡಿದರಾಗ ವೇಗದಲಿ ॥ ೧೦೮ ॥

ನೋಡಿದನು ವೀರೇಶ ದಾನವ ।
ರೋಡುವದು ತಾಕೊಂಡುಹಲಗೆಯ ।
ಕೂಡೆನಡೆದನು ಭದ್ರಕಾಳೀಸಹಿತ ತೇರಿಳಿದು ॥
ನಾಡೆ ಘೋರಿಡುತಿರುವ ವಾದ್ಯದಿ ।
ಮೂಢ ದಕ್ಷನ ಯಜ್ಞಶಾಲೆಗೆ ।
ಆಡಲೇನೆಡಬಲದ ವಂದಿದ್ವಯದಗಣದಲಿ ॥ ೧೦೯ ॥

ದ್ವಾರದೊಳಗಿಹ ಭಟರ ಸದೆಯುತ ।
ಭೈರವನ ಭಂಗಿಸುತ ಲಕುಮಿಯ ।
ಶೋರವುಂದಲೆಗೊಯ್ದು ಚಾಡೇಶ್ವರಿಯ ಕಿವಿಕೀಳ್ದು ॥
ಶಾರದೆಯ ಮೂಗರಿದು ಸ್ವಾಹಾ ।
ನಾರಿಕುಚಗಳನೀಗಿ ಶಚಿಗೆಯು ।
ಘೋರಮುದ್ರೆಯನೊತ್ತುತಿನ್ನುಳಿದವರ ಭಂಗಿಸುತ ॥ ೧೧೦ ॥

ನಡೆದನೈ ಘರ್ಜಿಸುತ ಖಡ್ಗವ ।
ನೊಡನೆ ಝಳ್ಪಿಸು ತಡಿಯು ನಿಡುತಲಿ ।
ಘುಡುಘುಡಿಸಿ ಬಾರೆಲವೊ ನೀಶಿವದ್ರೋಹಿಯೆಂದೆನುತ ॥
ಒಡನೆ ಖಡ್ಗದೊಳವನ ಶಿರವನು ।
ಜಡಿದು ಹಾರಿಸಿ ಹೋಮಕುಂಡದಿ ।
ಕೆಡಹಿನಿಂದನು ಘನಭಯಂಕರ ರೌದ್ರದಿಂದಾಗ ॥ ೧೧೧ ॥

ಜಯ ನಮೋಘನ ರೌದ್ರಮೂರುತಿ ।
ಜಯನಮೋಹರನಕ್ಷಿ ಸಂಭವ ।
ಜಯನಮೋವರ ಭದ್ರಕಾಳೀವರನೆ ದಯಕರನೆ ॥
ಜಯನಮೋಘನರಿಪು ಭಯಂಕರ ।
ಜಯನಮೋಕಲ್ಯಾಣ ದಾಯಕ ।
ಜಯನಮೋ ಖಳದಕ್ಷಮದಹರ ಯೆಂದುದಮರ ಗಣ ॥ ೧೧೨ ॥

ನೆರೆದಖಿಲ ಮನುಮುನಿ ಸುರಾಸುರ ।
ವರರು ಕರಗಳುಮುಗಿದು ಕರುಣಾ ।
ಶರಧಿ ನಮ್ಮಪರಾಧ ಕೋಟಿಗಳನ್ನು ಮರೆಯುತಲಿ ॥
ಪರಮ ದಯದಿಂಪಾಲಿಸೆನುತಲಿ ।
ಚರಣ ಸರಸಿಜಗಳಿಗೆವಂದಿಸು ।
ಶಿರದೆ ಕರಗಳ ಮುಗಿದು ನಿಂದರು ಜಯತು ಜಯತೆನುತ ॥೧೧೩॥

ನೊಂದು ದಕ್ಷನಸತಿಯರೆಲ್ಲರು ।
ನಿಂದು ದುಃಖದಲಿಂದಪದಗಳಿ ।
ಗೊಂದಿಸುತ ನೀನೆಮ್ಮ ಮಂಗಲ ಸೂತ್ರಪಾಲಿಪುದು ॥
ತಂದೆಕರುಣಾವನಧಿ ದಯದಿಂ ।
ದೆಂದು ಘನಭಯು ಭಕುತಿಯಿಂದಲಿ ।
ನೊಂದು ನಾನಾವಿಧದಿ ನುತಿಸಿದರಮಲಮಾನಸದಿ ॥ ೧೧೪ ॥

ಸಾರಿ ಪದಯುಗಪಿಡಿದು ಬೇಡಲು ।
ವೀರಭದ್ರೇಶ್ವರನೆ ನೀಡಯು ।
ದೋರಿಪಾಲಿಪುದೆಂದು ಹರಿಯಜರಾಗ ಬಿನ್ನೈಸೆ ॥
ತೋರಿದಯು ಕುರಿದಲೆಯು ಪತ್ತಿಸೆ ।
ಮೀರಿನಾಣ್ಚುತ ಪದಕೆಮಣಿಯುಲು ।
ದೂರಸಾರೆಲೊ ಸುರರಕೆಡಿಸಿದ ಪಾಪಿನೀನೆಂದ ॥ ೧೧೫ ॥

ಆಗಲವರೊಡಗೂಡಿ ತವಕದಿ ।
ಪೋಗಿಕೈಲಾಸಕ್ಕೆ ವರಕಡೆ ।
ವಾಗಿಲೋಳ್ ನಿಲಿಸುತ್ತಲೆಲ್ಲರ ದಿವಿಜಮುನಿಯೊಡನೆ ।
ಸಾಗಿತನ್ನಯು ಪಿತನ ಚರಣಕೆ ।
ಬಾಗೆಪರಶಿವ ನತುಲಹರುಷದೊ ।
ಳಾಗ ಪಿಡಿಯುತ ತೆಗೆದು ತಳ್ಕೈಸುತಲಿಮೈದಡಹಿ ॥ ೧೧೬ ॥

ನಡೆದ ಕಥನವನೆಲ್ಲನಾರದ ।
ನೊಡನೆ ತಾ ತಿಳಿಯುತಲಿ ಶಂಕರ ।
ಜಡಜಭವ ಹರಿಸುರೇಂದ್ರಾದ್ಯರ ಕರೆಸಿ ಶರೆಬಿಡಿಸೆ ॥
ಮೃಡನ ಪದಪಲ್ಲವಕೆ ಮಣಿಯುತ ।
ಪಡಗರದಿ ಕರಮುಗಿದು ನುತಿಸಿದ ॥
ರಡಿಗಡಿಗೆ ಪೊರೆದೇವ ತಪ್ಪಾಯ್ತೆಂದು ಭಕುತಿಯಲಿ ॥ ೧೧೭ ॥

ದೇವರಿಪುಘನ ವನದವಾನಲ ।
ಭಾವಭವಪಿತ ಗೋತ್ರರಿಪು ರಾ ।
ಜೀವಮುಖಸುರಸಿಚಯವಂದಿತಪದಸರೋಭವನೆ ॥
ಆ ವಿಮಲ ಮಾರ್ತಂಡ ಶಶಧರ ।
ಪಾವಕಾಂಬಕ ಕರುಣವನಧಿಯೆ ।
ಓವಿ ಪಾಲಿಪುದೆಮ್ಮ ಯಜ್ಞಕೆಯನ್ನು ನೋಡದಲೆ ॥ ೧೧೮ ॥

ದೇವನಿಮ್ಮಯ ಪದವನಂಬಿದ ।
ಗಾವಭಯ ತಾನಿಲ್ಲ ವೈರವ ।
ನಾವಗೈಯುವ ನವನಪಾಲಿಪರಿಲ್ಲ ಮೂಜಗದಿ ॥
ದೇವ ನಿಮ್ಮನು ಮರೆದನಮ್ಮನು ।
ಕಾವುದೈಯಪರಾಧ ನೋಡದೆ ।
ದೇವ ದೇವನೆ ನೀನೆಗತಿಮತಿಯೆನುತ ನುತಿಸಿದರು ॥ ೧೧೯ ॥

ಇಂತು ನುತಿಸುವ ದಿವಿಜದನುಜರ ।
ನಂತು ಸಂತೈಸುತಲಿ ಪರಶಿವ ।
ಮುಂತೆ ನೀವೆಮಗಹಿತ ಕಾರ್ಯಕೆ ಪೋಗದಿರುತಿಹುದು ॥
ಪಿಂತೆಮಡಿದಿಹ ಬಲವು ಜೀವಿಪು ।
ದಂತು ನಿಮ್ಮಗಳಂಗ ಭಂಗವ ।
ದಿಂತು ತೋರದೆ ಮುನ್ನಿನಂದದೆ ಚಂದವಾಗಿಹುದು ॥ ೧೨೦ ॥

ಎಂದು ಪರಸುತ ದನುಜದಿವಿಜರ ।
ವೃಂದವನು ಕಳುಹಲ್ಕೆ ಹರುಷದೊ ।
ಳಂದು ಪೋದರು ತಮ್ಮತಮ್ಮಯ ಪತ್ತನಂಗಳ್ಗೆ ॥
ಮುಂದೆ ಯುಗ್ರದಿನಿಂದಿರುವ ನಿಜ ।
ನಂದನಗೆ ಶಾಂತಿಯ ನೊಡರ್ಚಿಸಿ ।
ಮಂದಹಾಸದೊಳಿರ್ದ ಪರಶಿವನ ತುಲಹರುಷದಲಿ ॥ ೧೨೧ ॥

ಕಾಮಹರ ನಾಘೋರ ಮುಖದಿಂ ।
ಭೂಮಿಯೊಳ ಗವತರಿಸಿ ಸುಜನ ।
ಸ್ತೋಮದಿಷ್ಟಾರ್ಥಗಳ ನೀಯುತಲಮಿತ ಸಂತಸದಿ ॥
ಆಮಹಾಮತ ವೀರಶೈವವ ।
ಪ್ರೇಮದಿಂ ಸ್ಥಾಪಿಸಿದ ನೇಕೋ ।
ದಾಮ ಶ್ರೀಗುರು ಸಾರ್ವಭೌಮನೆ ಪಾಲಿಸನವರತ ॥ ೧೨೨ ॥

ವೀರಭದ್ರೇಶ್ವರ ಪುರಾಣವು ।
ಭೂರಿ ಭಕುತಿಯುಲಿಂದ ಸಂತತ ।
ವಾರು ಪೂಜಿಸುತಿಹರೊ ಪಠಿಸುತಲಿಹರೊ ಪೇಳುವರೊ ॥
ಸಾರಿ ಕೇಳುವರೆಲ್ಲರಿಗೆ ಮನ ।
ವಾರಭೀಷ್ಟವನಿತ್ತು ಪಾಲಿಪ ।
ಮಾರವಣಿ ವಿಧಿಸುರಪ ಯಕ್ಷೇಶಾದಿ ವಿನುತಶಿವ ॥ ೧೨೩ ॥

ಮೂರನೆ ಸಂಧಿ ಸಂಪೂರ್ಣಂ

ಅಂತು ಸಂಧಿ ೩ ಕ್ಕಂ ಪದನು ೨೧೩ ಕ್ಕಂ

ಮಂಗಳ ಮಸ್ತು



ಶ್ರೀ ವೀರಭದ್ರೇಶ್ವರಃ ಪ್ರಸನ್ನಃ

# ಶ್ರೀ ವೀರಭದ್ರೇಶ್ವರ ಪುರಾಣ





## ನಾಲ್ಕನೇ ಸಂಧಿ

* ಭಾಮಿನೀ ಷಟ್ಪದಿ

ಹರನಿರೂಪವ ನಾಂತುವೀರನು ।
ನರಹರಿಯನಾ ಜ್ವಾಲವ್ಯಾಳರ ।
ತರಿದನೈಘುನ ಪಂಚಮೇಢ್ರಾಸುರರ ನೆಲ್ಲರನು ॥

ಚಂಡಕರ್ಬುರ ಪಂಚಮೇಢ್ರನು ।
ದಿಂಡುಗೆಡಹುತಲಖಿಲರನು ಮುಂ ।
ಕೊಂಡುತಿನುತಿರಲಂಜಿ ಮೊರೆಯಿಡಲಭವನನುಮತಿಯ ॥
ಕೊಂಡು ಬಂದುದ್ದಂಡ ದನುಜನ ।
ದಿಂಡುಗೆಡಹುತ ಲಷ್ಟಮುಸ್ತಕ ।
ಖಂಡಿಸಿದ ದೋರ್ದಂಡ ವೀರೇಶ್ವರನೆ ಪಾಲಿಪುದು ॥ ೧ ॥

ತಾರಕಾಸುರನಾತ್ಮಜನು ಬಹು ।
ಶೂರ ಕಮಲಾಕ್ಷನನು ರಣದಲಿ ।
ವೀರತನದಿಂ ಭಂಗಿಸುತ ಲತಿಸಾಹಸತ್ವದಲಿ ॥
ಹಾರಿಸುತ ಪುರದೊಳಗೆ ಕೆಡಹಿದೆ ।
ವೀರಭದ್ರೇಶ್ವರನೆ ನಿಮ್ಮಯ ।
ವೀರ ವೀರತೆ ಪೊಗಳಲಳವೆ ರಕ್ಷಿಸನವರತ ॥ ೨ ॥

ಜಗವದತಿ ಸಂತಸದೊಳಿರುತಿರ ।
ಲೊಗೆದು ದೊಂದದ್ಭುತವ ದಾಗಳೆ ।
ನೆಗೆದುಸುರರೊಡಗೂಡಿ ಸುರಪತಿ ಹರನಸನ್ನಿಧಿಗೆ ॥
ಮುಗಿದುಕರಗಳ ನಮಿಸಿ ಶಂಕರ ।
ಮುಗಿದು ದೆಮ್ಮಯ ಫಾಲದಕ್ಕರ ।
ಜಗವಕೊಲುವ ಹಿರಣ್ಯಕಶಿಪೆಂದೆಂಬ ದಾನವನು ॥ ೩ ॥

ಸರಸಿಜೋದ್ಭವನನ್ನು ಮೆಚ್ಚಿಸಿ ।
ಹೊರಗೊಳಗೆ ಪಗಲಿರುಳು ಖಗಮೃಗ ।
ನರಸುರಾಸುರ ಶರಶಸ್ತ್ರಪಾಶಾದ್ಯಾಯುಧಗಳಿಂದ ॥
ಮರಣವಾಗದ ವರವಪಡೆದತಿ ।
ಕರಕರೆಯುಗೊಳಿಸುತ್ತ ಧರಣಿಯ ।
ಕಿರಿದು ಭಾಧಿಪ ಹರಿಸಿ ಬಾಧೆಯ ಪೊರೆವುದೆಂದೆರಗೆ ॥ ೪ ॥

ಸುರನಿಕರಕೀಯುತ್ತ ಲಭಯವ ।
ಸುರರಿಪುವ ನೀಹತಿಪುದೆನುತಲಿ ।
ಪರಸುತಲಿ ಕಳುಹಲ್ಕೆ ಮೋದದಬಿಬಂದು ಹರಿಜವದಿ ॥
ಅರರೆ ದೈತ್ಯನ ಮುಂದಿರದಿ ತಾ ।
ಸರಿಯುದೊಲು ನೆಲಸಿರ್ದುಸ್ತಂಭದಿ ।
ಭರದಿ ಜನಸಿದನೊಂದುದಿನ ನರಹರಿಯರೂಪದಲಿ ॥ ೫ ॥

ಪಿಡಿದವನ ಸಂಜೆಯಲಿ ತನ್ನಯ ।
ತೊಡೆಯೊಳಿಡುತಲಿ ಉಗುರು ಗೊನೆಯಿಂ ।
ಪೊಡೆಯುಬಗೆಯುತನಿಂದು ಹೊಸ್ತಿಲೊಳಾಗರಕ್ತವನು ॥
ಕುಡಿದು ಸಂಹರಗೈದು ದನುಜನ ।
ಪೊಡವಿಗತಿಸಂತಸವ ಬೀರಿದ ।
ಜಡಜನಯುನನು ಬಹಳರೌದ್ರವನಾಂತ ಕೆಲದಿನಕೆ ॥ ೬ ॥

ಆಮುದಚ್ಚರಿ ಜಗಕೆ ಆಡಿಯೊ ।
ಳಾದ ವಿಲಯದ ರಕ್ಷಕರ್ತನೆ ।
ಆದನಿಂದಿನ ಮೃತ್ಯುದೇವತೆಯೆಂದು ಬೆದರುತಲಿ ॥
ಆದಿತೇಯರ ಕೂಡೆಶಿವನೆಡೆ ।
ಗಾ ದಿವಸ್ಪತಿ ಪೋಗಿಕರಮುಗಿ ।
ಪಾದುದೈ ದೇವೇಶ ಅಮೃತವೆ ವಿಷವದಿಂದೆಂದ ॥ ೭ ॥

ಘೋರ ಹಿರಣ್ಯಕಶಿಪುವನೆ ಸಂ ।
ಹಾರ ಗೈದಾರಕುತಪೀರಿದ ।
ನಾರಸಿಂಹನೆ ಮೃತ್ಯುದೇವತೆಯಾದ ನಮಗಿಂದು ॥
ಆರೆ ತನ್ನವರನ್ಯ ರೆನ್ನನ ।
ಪಾರಲೆಕ್ಕಿಸ ಮನ್ನಿಸನುತಾ ।
ನಾರುಯಂಬುದ ನರಿಯದಲೆ ಸರ್ವರನು ಬಾಧಿಸನು ॥ ೮ ॥

ಮೂರು ಲೋಕವೆ ನಡುಗುತಿಹುದೈ ।
ನಾರಸಿಂಹನ ನಾಮಕೇಳಲು ।
ತೋರಿದಯ ಭಯವಳಿದು ತ್ರಿಜಗವಪಾಲಿಸೆಂದೆನಲು ॥
ವೀರಭದ್ರೇಶ್ವರನೆ ಬಾರೈ ।
ಸಾರಿ ನೀನರುಹುವುದು ನಿಜವನು ।
ಘೋರದೈತ್ಯನಹರಿಸ ಬಂದುದ ಮರದೆಯಾಯೆನುತ ॥ ೯ ॥

ಪೇಳು ವಿಧವಿಧ ನೀತಿಯನುನೀ ।
ಕೇಳದಿರೆ ಶಿರಚರ್ಮಯುಗಳವ ।
ಶೀಳುತಲಿ ತಂದಪುದುಪೋಗೈಯೆನಲು ನೋದದಲಿ ॥
ಕೇಳಿರೈ ನಿರ್ಜರರೆ ಹರುಷವ ।
ತಾಳಿರೈ ಯಂದೆನುತ ಧೈರ್ಯವ ।
ಪೇಳಿ ತಾನತಿಬಲನ ಗತಿಯಲಿ ಬಂದವೀರೇಶ ॥ ೧೦ ॥

ಕಂಡು ಕೇಳ್ದೆನರಹರಿಯೆ ನೀ ।
ಪುಂಡರೀಕಾಂಬಕನು ಜಗವನು ।
ಚಂಡಕರ್ಬುರ ಹಿರಣ್ಯಕಶ್ಯಪ ಬಾಧೆಗೊಳಿಸಲ್ಕೆ ॥
ಅಂಡಲಿಯು ತನುರಾಳಿನೊರೆಯಿಡೆ ।
ಕೆಂಡಗಣ್ಣಿ ಭವಂದು ಕಳುಹಲು ।
ದಿಂಡುಗೆಡಹುತಲವನ ರಕುತವ ಕುಡಿಯುತಲಿ ನೀನು ॥ ೧೧ ॥

ಮತ್ತನಾಗುತಲೀಗ ಜಗವನು ।
ತತ್ತರವ ಗೊಳಿಸುತ್ತಲಿಹನೀ ।
ನುತ್ತಮೋತ್ತಮ ಪುರುಷರಕ್ಷಾಕರ್ತತಿಳಿಯೆನಲು ॥
ಅತ್ಯಧಿಕಕೋಪದಲಿ ಯಾಜ್ಞೆಯು ।
ನಿತ್ತರಾರಿದ ಪೇಳ್ವನೀನಾರ್ ।
ಚಿತ್ತಪಲ್ಲಟವಿಹುದೆ ಯುಮುತಾಕರೆವನೇ ಯೆಂದು ॥ ೧೨ ॥

ಅರಿಯದಲೆ ನಾನಾರುಯಂಬುದ ।
ಮರುಳನಂದದೊಳೀ ವಿಧದಿನೀ ।
ಬರಿದೆ ಗಳಹದೆ ತೆರಳಿಬಾಳುವುದೆನುತ ಘರ್ಜಿಸಲು ॥
ವರದಯಾನಿಧಿ ವೀರಭದ್ರನು ।
ಕೆರಳದಲೆ ನರಹರಿಯೆ ಕೇಳ್ವೆ ।
ಮರೆದೆ ನಿನ್ನಯು ನಿಜವ ನಸುರನರುಧಿರ ಪೀರ್ದುದರಿಂ ॥ ೧೩ ॥

ಬೇಡ ಬೇಡೈ ದುಡುಕುತನವದು ।
ನೋಡುಬೊಮ್ಮನು ಜಗವರಚಿಸಿದ ।
ನಾಡಲೇನದ ರಕ್ಷಿಸುವ ಹರಿನೀನು ತ್ರೈಜಗವ ॥
ಕೂಡೆನಿರ್ಮಿಸಿ ಪೊರೆದು ಹತಿಸುತ ।
ಬೇಡಿದರಿಗಿಷ್ಟಾರ್ಥ ವೀಯುತ ।
ಕೇಡನೆಣಿಪರ ಹರಣಗೊಳ್ಳುವ ಹರನತನಯನು ವಾ ॥ ೧೪ ॥

ಖೂಳದಕ್ಷನ ಯಜ್ಞ ಭಂಗಿಸಿ ।
ಕಾಳಗದೊಳೆಡು ರಾಂತನಿನ್ನನು ।
ಶೀಳದುಳುಹಿದ ವೀರಭದ್ರನು ಏಂಬುದನುಮುರಿದು ॥
ತಾಳಿರೋಷವ ಗರ್ವದಿಂಧಿಹ ।
ತ್ರೋಳಬಲ್ಮೆಯ ತೋರದಲೆ ನಾ ।
ಪೇಳುವದ ನೀ ಕೇಳಿ ಬಾಳ್ವೆ ಹರಿಯೆಯೆಂದೆನಲು ॥ ೧೫ ॥

ಕೇಳಿಗಹಗಹಿಸುತ್ತ ನರಹರಿ ।
ಕೇಳಿದೆನು ನಾನಿಂದು ಚಿತ್ರವ ।
ಪೇಳಿಲೇ ನಾಗೊರವ ಸೃಜಿಯಿಸಿ ಪೊರೆದುಹತಿಸುವನೆ ॥
ಏಳೆರಡು ಜಗದೊಡೆಯ ನಾನಿರೆ ।
ಮೇಲೆಯನ್ನಯ ಕರ್ತನೆಂಬೆಯ ।
ಜಾಳುನುಡಿ ನುಡಿಯದಲೆ ನೀಪೋಗೆನುತ ಘರ್ಜಿಸಿದ ॥ ೧೬ ॥

ಸೈರಿಸುತ ವೀರೇಶಕೇಳ್ವೆ ।
ಶೌರಿಪೂರ್ವದಿ ಜಗವಬಾಧಿಪ ।
ಕ್ರೂರದನುಜನ ಹರಿಸಲಭವಾಜ್ಞೆಯಲಿ ಝುಷವಾಗಿ ॥
ಸಾರಿನೀತರಿದವನ ಗರ್ವಿಸ ।
ಲಾರದಲೆ ಸುರರಭವಗರುಹಲು ।
ಘೋರಬಕ ರೂಪದಲಿ ನಿನ್ನವತಾರ ಹರಿಸಲ್ಕೆ ॥ ೧೭ ॥

ಪಂಕಜೇಕ್ಷಣ ನೀತ್ವತಕ್ಷಣ ।
ಬಿಂಕ ವಿಲ್ಲದೆ ಮತ್ಸ್ಯಕೇಶನ ।
ಲಂಕೆಯೊಳು ಸ್ಥಾಪಿಸುತ ಪೂಜಿಸಿಧನ್ಯತೆಯವಡೆದ್ದೆ ॥
ಹಂಕರಿಸೆಗೋತ್ರಾರಿ ಮುನಿಪತಿ ।
ಶಂಕಿಸದೆ ಶಪಿಸಲ್ಕೆ ಭಯದಲಿ ।
ಶಂಕರನ ಪದಕೆರಗಿ ದೈನ್ಯದಿ ಬೇಡಿಕೊಳಲಾಗ ॥ ೧೮ ॥

ಸುರರಸುರರೊಂದಾಗಿಶೈಲವ ।
ಉರಗದಿಂಬಂಧಿಸುತ ಸಿಂಧುವ ।
ಭರದಿ ಕಡೆಯಲು ನಿಮ್ಮಸಂಪದ ದೊರೆವುದೆಂದೊರೆದು ॥
ಹರಿಯೆನೀ ಕಚ್ಛಪದರೂಪದಿ ।
ಪೊರುವು ದದ್ರಿಯನೆಂದು ಕಳುಹಲು ।
ಭರದಿಬಂದಾಕಮಠರೂಪದಿ ಪೊತ್ತುಶೈಲವನು ॥ ೧೯ ॥

ಮುಂದೆ ಕೆಲಕಾಲದಲಿ ಗರ್ವಿಸೆ ।
ನೊಂದು ಮೊರೆಯಿಡೆ ದಿವಿಜರಾಕ್ಷಣ ।
ಬಂದು ಭೈರವರೂಪತಾಳುತ ಕೊಲಲುಶಿವನಾಗ ॥
ನಿಂದುನೀ ನಿಜರೂಪದಲಿ ಬುಧ ।
ರಿಂದ ಕೂರ್ಮೇಶ್ವರನ ನಾಮದಿ ।
ವೃಂದಗಿರಿಯಲಿ ಸ್ಥಾಪಿಸುತ ನಿಜತಾಣವನು ಸೇರ್ದೆ ॥ ೨೦ ॥

ಕಳಿಯಲಿಕೆ ಕೆಲಕಾಲವಾದುದು ।
ಖಳಹಿರಣ್ಯಾಂಬಕನ ಧಾಳಿಯು ।
ತಳುವದಲೆ ಬಿನ್ನೈಸೆ ನಿರ್ಜರರಾಗ ಶಿವಕಳುಹೆ ॥
ನಳಿನ ನೇತ್ರನೆಕಿಟಿಯ ರೂಪವ ।
ತಳೆದವನ ಸಂಹರಿಸಿ ಬಾಧೆಯ ।
ಕಳೆದುಗರ್ವಿಸಲರಿದು ಷಾಣ್ಮಾತುರನ ಶಿವಕಳುಹೆ ॥ ೨೧ ॥

ಬಂದು ರಣದೊಳು ಹರಿಸಲಾಕ್ಷಣ ।
ಇಂದಿರೇಶನೆ ಮುಗಿದುಕರಗಳ ।
ಚಂದದಿಂದೀ ಕೋರೆದಾಡೆಯ ಧರಿಪುದಭವಂಗೆ ॥
ಎಂದುನುತಿಸುತವರಾಹೇಶನ ।
ನಂದು ಗಯೆಯಲಿ ಸ್ಥಾಪಿಸುತ್ತಲಿ ।
ಚಂದದಿಂದಲಿ ಪೋದೆ ವೈಕುಂಠಕ್ಕೆ ಹರುಷದಲಿ ॥ ೨೨ ॥

ಆಪನ್ನೈ ಝುಂಷಕಮುಕಕಟ ಮೂ ।
ರಾದುವೈ ನಾಲ್ಕನೆಯ ನಿನ್ನೀ ।
ಕ್ರೋಧ ರೂಪದ ಭಯವ ಬೀರುವ ನೃಸಿಂಹವತಾರ ॥
ಆದಕಾರಣದಿಂದ ಲಿದನರಿ ।
ದಾದ್ಗಿದೇವಗೆ ಶರಣುಪೊಗು ನೀ ।
ನಾದರಿಪ ಶಿವ ದುಡುಕುತನ ಬೇಡೆಂದು ಪೇಳಲ್ಕೆ ॥ ೨೩ ॥

ಕೇಳಿ ಘುಡು ಘುಡಿಸುತ್ತ ನರಹರಿ ।
ಮೇಲೆ ಹಾರಲ್ಕು ತಪ್ಪಿಸುತ ತಾ ।
ಬೀಳಲೊದೆಯುತಲಾಗ ತಾಳಿದ ಶರಭ ರೂಪವನು ॥
ಪೇಳಲೇ ನದರದ್ಭುತವನಾ ।
ನೀಲಗಿರಿ ಪಕ್ಷಗಳ ನಾಂತವೊ ।
ಲಾಲಿಗರಿದೆನೆ ನೋಡಲತಿಭಯಭೀತಿ ಬಿರುತಲಿ ॥ ೨೪ ॥

ನರಹರಿಯು ಪಿಡಿದೆತ್ತಿಗಗನದಿ ।
ತಿರುಗಿ ದೆಸೆ ದೆಸಗಳನು ಬಿಸುಡಲು ।
ಧರಗೆ ಬಿದ್ದಾಕ್ಷಣದೊಳೆದ್ದನು ಚಂಡಿನಂಡದಲಿ ॥
ಉರಿಯುನುಗುಳುತ ಪಿಡಿದು ಶರಭನ ।
ಧುರದಿ ಸಮಬಲನಾಗಿ ರೌದ್ರದಿ ।
ಕರಿಯು ಕುಂಭದೊಳೆರಗುವಂದದಿ ಹಾರಲವಣಿಸಲು ॥ ೨೫ ॥

ಕೆಂಡಗಳನುಗುಳುತ್ತ ಶರಭನು ।
ಕೊಂಡು ನರಹರಿಯನ್ನು ಭಾಸ್ಕರ ।
ಮಂಡಲಕೆ ಹಾರುತ್ತ ಕೆಡಹುತ ಸಾಗರಾಂತರಕೆ ॥
ದಿಂಡುರುಳ್ಚುತ ಲೊದೆದು ತುಳಿಯುತ ।
ಮಂಡೆಯನು ಪಿಡಿದೆಳದು ಸ್ಲೂಂಕುತ ।
ಬಂಡುಗೆಡಿಸಿದ ವಿಂತುನರಹರಿಯನ್ನು ವಿಧ ವಿಧದಿ ॥ ೨೬ ॥

ಕಾರುತ್ತಲಿ ರಕ್ತವನು ನರಹರಿ ।
ತೋರಿ ಶೌರ್ಯವ ಪಿಡಿಯೆ ಶರಭನು ।
ಹಾರಿಧರಣಿಗೆ ಕೆಡಹಿ ಶಿರವನು ಚಂಚುವಿಂ ಪಿಡಿದು ॥
ತೋರು ನಿನ್ನಯ ಶೌರ್ಯವೆನುತಲಿ ।
ಸಾರಿಶಿರವನು ತರಿಯ ಲಾಕ್ಷಣ ।
ಮಾರಪಿತಕರಮುಗಿದು ನಾನಾ ವಿಧದಿನುತಿಸುತ್ತ ॥ ೨೭ ॥

ಮತ್ತೆ ಓಬಳ ಕ್ಷೇತ್ರದಲಿ ತಾ ।
ನುತ್ತಮದ ಶಿವಲಿಂಗಮೂರ್ತಿಯು ।
ನುತ್ತಮೋತ್ತಮ ನೃಸಿಂಹೇಶ್ವರನೆಂಬನಾಮದಲಿ ॥
ಅತ್ಯಧಿಕ ಭಕುತಿಯಲಿ ಸ್ಥಾಪಿಸಿ ।
ಮತ್ತೆ ಸರಿದನು ತನ್ನ ಪತ್ತನ ।
ಕಿತ್ತ ಶಿರಚರ್ಮಗಳ ಕೊಂಡಾವೀರಹರನೆಡೆಗೆ ॥ ೨೮ ॥

ಬಂದು ಪಥಕರ್ಪಿಸಲು ಶಂಕರ ।
ನಂದು ಕೊಂಡಾಡುತ್ತಲಿ ತನಯನು ।
ತಂದ ಶೀರ್ಷವ ಕೀರ್ತಿಮುಖವೆಂದೆನುತ ಭೂಷಣದಿ ॥
ಚಂದದಿಂ ಸೇರಿಸುತ ಚರ್ಮವ ।
ಸಂದ ಸಿಂಹಾಸನವ ಗೈವುತ ।
ಬಂದದಿವಿಜರಕಳುಹಿಸುಖದಿಂದಿರ್ದ ಪರಶಿವನು ॥ ೨೯ ॥

ಮುಂದೆ ಕೆಲಕಾಲಕ್ಕೆ ಧಾಳಿಯು ।
ಬಂದುದಮರರಿಗಸುರರಿಂದಲಿ ।
ನೊಂದು ಬಿನ್ನೈಸಿದರು ತ್ರಿಪುರರ ಬಾಧೆಯಭವಂಗೆ ॥
ಕಂದುಗೊರಳನು ಸರ್ವದಿವಿಜರ ।
ವೃಂದದೊಡ ನೈತಂದು ಪಾಳಯ ।
ವಂದು ಬಿಡುತಮರರನು ಕಳುಹಿಂದಲಗ್ಗೆ ಹೊಡಲ್ಕೆ ॥ ೩೦ ॥

ಆಗವಿದ್ಯುನ್ಮಾಲಿಯನು ಗುಹ ।
ಬೇಗಮೂರ್ಛೆಯು ಕೆಡಹಲರಿಯುತ ।
ತಾಗಿದನು ಕಮಲಾಕ್ಷನಾರ್ಭಟಿಸುತ್ತ ಕೋಪದಲಿ ॥
ನೀಗಿ ಧೈರ್ಯವ ನಮರರೋಡಲು ।
ತೂಗಿ ಶಿರ ವೀರೇಶ ದೈತ್ಯನ ।
ತಾಗುತಲಿ ಕೆಡೆಯೆಚ್ಚ ಕೂರಲಗಿಂದಲಾಕ್ಷಣದಿ ॥ ೨೧ ॥

ಪಿಡಿದವನ ಕೊಂಡೊಯ್ದು ಶರವದು ।
ಕೆಡಹಿತಗ್ರಜನಿದಿರಿನಲಿಯುವ ।
ಘುಡು ಘುಡಿಸೆ ಬರೆಶಿಂಶುಮಾರನನಂದಿ ಶೀಳಲ್ಕೆ ॥
ಒಡನೆ ಬಂದಾ ತಾರಕಾಕ್ಷನು ।
ಮೃಡನ ಶರಘಾತದಲಿ ನೋಯುತ ।
ಲಡರೆ ತ್ರಿಪುರವ ನಾಗಲುರುಹಿದನಭವಕೋಪದಲಿ ॥ ೨೩ ॥

ಪ್ರೇಮದಿಂ ಶಿವಶಂಭು ಭಟ್ಟನ ।
ನಾಮದಲಿ ತಾನೊಂದುದಿನದಲಿ ।
ರಾಮನಾಶ್ರಮದಲ್ಲಿ ದರ್ಶನವೀಯೆ ಪದಕೆರಗಿ ॥
ತಾಮುದದಿ ಗದ್ದುಗೆಯ ನಿಕ್ಕುತ ।
ಲಾಮಹಾಪದ ತೀರ್ಥಕೊಳ್ಳುತ ।
ಶ್ರೀ ಮಹೇಶ ವಿಭೂತಿಮಹಿಮೆಯ ಬೋಧಿಸಂದೆರಗೆ ॥ ೨೨ ॥

ಕೇಳುನೀನೆಲೆ ರಾಮನಿನ್ನಗೆ ।
ಪೇಳಿಲೇ ನಾಭಸ್ಮ ಮಹಿಮೆಯ ।
ಖೂಳದೈತ್ಯರ ಜ್ವಾಲವ್ಯಾಳಾ ಪಂಚಮೇಢ್ರರನು ॥
ಶೀಳಿನುಂಗಿದ ದಿವಿಜಯುತಿಗಳ ।
ಪಾಲಿಸಿದ ವೀರೇಶನನುಪಮ ।
ಲೀಲೆಗಳ ನೀನಾಲಿಸೆನುತಲಿಪೇಳ್ದ ಹರುಷದಲಿ ॥ ೨೪ ॥

ಮುನಿಪ ನೋರ್ವನ ನೂರ್ವರರಸಿಯ ।
ರಣಗರಲಿ ಪಿರಿಯರಸಿಯಾತ್ಮಜ ।
ನನಘ ನಾಮುಕೆತಕ್ಕ ನಡತೆಯೊಳಿರ್ದನಾ ಕರುಣಿ ॥
ಘನತೆಯದಕಾರದಲೆಯವಸುಳಿ ।
ದನುಜ ರವನನು ಕೊಲಲುಬರಲವ ।
ನನಿತರೊಳಗದನರಿದು ರಾಜನಿಗರುಹೆ ಬರುತಿರಲು ॥ ೩೫ ॥

ತಾಪಸೋತ್ತಮ ನೋರ್ವನಲ್ಲಿಯ ।
ಭೂಪಗೀಯಲು ಜಂಭ ಫಲವನು ।
ತಾ ಪವಿತ್ರತೆಯಿಂದತರುತದನಿರಿಸಿ ಮೀಯುತಿರೆ ॥
ಆ ಫಲವ ನೀಕರುಣಿಮೂಸಿಸೆ ।
ಕೋಪದಿಂ ಮುನಿಶಾಪವಿತ್ತನು ।
ಪಾಪಿನೀ ಮೂಸಲವಕೆಡಿಸಿದೆ ನೊಣವದಾಗೆನುತ ॥ ೩೬ ॥

ಕರುಣಿದೈನ್ಯದಿ ಪಾದಕೆರಗಲು ।
ಕರುಣದಿಂದಲಿ ಮುನಿ ವಿಶಾಪವ ।
ಕರುಣಿಸಿದ ನೀ ಶತವರುಷ ನೊಣವಾಗಿರಲು ಬಳಿಕಾಗ ॥
ಪರಮ ಪಾವನ ಮುನಿ ದಧೀಚಿಯ ।
ಪರುಶನದೆ ನಿಜರೂಪಬರುವುದು ।
ತೆರಳುನೀನೆನೆ ಬಂದುಸತಿಗಿದನರುಹಿನೊಣವಾಗೆ ॥ ೩೭ ॥

ಸಲಹುತಿರ್ದಳು ಮಧುಘೃತೋತ್ತಮ ।
ಫಲಗಳನುತಾ ನೀವು ತನುದಿನ ।
ಘಳಿಲ ನೆಲ್ಲವ ನರಿಯುತಾದಾಯಾದಿಗಳು ಹರುಷದಲಿ ॥
ಹೊಳೆವತ್ಯೆಲದ ಕೊಪ್ಪರಿಗೆ ತಂ ।
ದಿಳುಹಿನೊಣಗಳ ನೆಲ್ಲಕೆಡಹಲು ।
ಅಳಿಯಲುಲದರೊಳು ಬಿಪ್ಪ ಕರುಣಿಯುಸುದತಿ ದುಃಖದಲಿ ॥೩೮॥

ಪರಮಸತಿ ನೀ ಪಾಲಿಸೆಂದೆನು ।
ಶಿರಗಲಾಗಲರುಂಧತಿಯುಘನ ।
ತರದ ಭಕುತಿಯಲಿ ಶಿವಷಡಕ್ಷರ ಮಂತ್ರನೆನೆಯುತಲಿ ॥
ವರವಿಭೂತಿಯ ತಳೆಯಲಾ ।
ಕರುಣಿ ನೋಣರೂಪದೊಳೆಜೀವಿಸೆ ।
ಹರುಷದಿಂದಲಿ ತಂದು ಪಾಲಿಸುತಿರ್ದಳವನ ಸತಿ ॥ ೩೯ ॥

ಮುಂದೆ ಕೆಲದಿನಕಳಿಯೆ ನೋಣವಾ ।
ಮಂದಗಾಮಿನಿ ಸತಿಶುಚಿಸ್ಮಿತೆ ।
ಬಂದು ಮುನಿಪದಧೀಚಿಯಡಿಗಳ ಪಿಡಿದು ದುಃಖಿಸುತ ॥
ತಂದೆಕರುಣಿಸು ಪತಿಯನೆಂದೆನ ।
ಲಂದು ಪಂಚಾಕ್ಷರವ ನೆನೆಯುತ ।
ತಂದುಭಸ್ಮವತಳೆಯೆ ನಿಜರೂಪದಲಿ ಜೀವಿಸಿದ ॥ ೪೦ ॥

ಹರುಷದಲಿ ದಂಪತಿಗಳಾ ಮುನಿ ।
ವರನಿ ಗೊಂದಿಸಿ ಬೇಡಿದರು ಘನ ।
ಕರುಣನಿಧಿ ನೀವಿಂದು ದಯಗೈದೆಮ್ಮ ಮಂದಿರಕೆ ॥
ಪರಶಿವನ ಪೂಜೆಯನು ಗೈದಾ ।
ದರದಿಪರಸುವುದೆಮ್ಮನೆಂದೆನೆ ।
ತೆರಳಿ ಮುದದಲಿ ಲಿಂಗಪೂಜೆಯ ಗೈದನಂತರದಿ ॥ ೪೧ ॥

ಪೇಳುವುದು ಗುರುದೇವ ಭಸ್ಮದ ।
ಲೋಲ ಮಹಿಮೆಯನೆಂದು ಬೇಡಲು ।
ಪೇಳಲಿಕೆ ವಶವೆಲ್ಲಕೇಳೀ ಭೂತಿ ಮಹಿಮೆಯನು ॥
ಖೂಳದೈತ್ಯರ ಹತಿಸಿರಣದಲಿ ।
ಪಾಲಿಸಿದ ಮಡಿದಮರನಿಚಯವ ।
ಲೋಲಭೂತಿಯ ತಳೆದು ವೀರೇಶ್ವರನು ತವಕದಲಿ ॥ ೪೨ ॥

ಪರಮಪಾವನ ಮಹಿಮೆಯಿದ ನಾ ।
ದರಧಿಶಿವನಂದೀಶ ಗರುಹಲಿ ।
ಕೊರೆದ ನಂದಿಯು ಸನತ್ಕುಮಾರ ಮಹಾಮುನಿವರಗೆ ॥
ಅರುಹೆ ವ್ಯಾಸನಿಗಾತ ಸೂತನಿ ।
ಗೊರೆಯಲಾತನು ಹರುಷದಲಿ ವಿ ।
ಸ್ತರಿಸಿದನು ವೈಶಂಪಾಯ ನೊದಲಾದಖಿಳಮುನಿಗೆಳಿಗೆ ॥ ೪೩ ॥

ಈ ಮಹೋತ್ತಮ ಪುಣ್ಯಚರಿತೆಯ ।
ಪ್ರೇಮದಿಂ ಕೇಳ್ವವರ ಭವಹರ ।
ರಾಮಣೀಯಕಸಕಲ ಸಂಪದ ಸಿದ್ಧಿಯಿಹದೊಳಿನೆ ॥
ಭೂಮಿಯೊಳು ನೀವತುಲ ಧನ್ಯರು ।
ಶ್ರೀಮಹೇಶನ ಕೃಪೆಯ ದಪ್ಪದು ।
ಕಾಮಿತಾರ್ಥಗಳೆಲ್ಲ ಸಿದ್ಧಿಪವೆಂದು ಪೇಳಿದನು ॥ ೪೪ ॥

ಜಲಧಿ ಮಧ್ಯದೊಳೊಪ್ಪುತಿರು ವಾ ।
ಜಲಜನಾಭನ ಲಲಿತಲೀಲಾ ।
ಸ್ಥಲವದೆನಿಸುವ ಪಾರಿಜಾತಾಚಲದಿ ವೀರೇಶ ॥
ಜಲಪವನ ಕೇಳಿಯ ವಿಲಾಸದಿ ।
ನೆಲಸಿ ವಿಹರಿಸುತಿರಲು ದರುಶನ ।
ಕೆಳಸಿ ಪೋದೆವು ಸುರರೊಡನೆ ಜಮದಗ್ನಿ ಮೊದಲಾಗಿ ॥ ೪೫ ॥

ಪತ್ತಿ ಬರುತಲಿ ಗಿರಿಯ ಕಂಡೆವು ।
ಪತ್ತು ದೆಸೆಗಳ ಮುಸಕಿ ಘನರವ ।
ವೆತ್ತು ಛಿಟಛಿಟಲೆನುತ ರೌದ್ರಾರ್ಭಟದಿ ಧರೆನಡಕೆ ॥
ಪತ್ತಿ ಧಳ್ಳುರಿಸುಡುತ ಬರೆ ಭಯ ।
ವೆತ್ತು ಶಿವಘೋಯೆನ್ನುವಲಿ ಮುಸು ।
ಕುತ್ತ ದಾವಾನಲವು ಸುಟ್ಟುದು ನಮ್ಮನಾಕ್ಷಣದಿ ॥ ೪೬ ॥

ಸರವ ಕೇಳುತ ವೀರಭದ್ರೇ |
ಶ್ವರನು ಜವದೊಳಗಾಗವಿುಸುತಲಿ |
ಶರಿರ ಬೆಂದಂಗದಲಿ ಕಾಣುವ ನಮ್ಮಗಳ ಕಂಡು ||
ಭರದಿ ರೌದ್ರಾರ್ಭಟದಿ ಜ್ವಾಲೆಯು |
ನಿರದೆನುಂಗುವೆನೆನುತ ಬರಲಿದ |
ನರಿದು ಭಾರತಿ ಬೇಡಬೇಡೈ ವೀರಭದ್ರೇಶ || ೪೭ ||

ಇದು ಮಹಾಘನ ಜ್ವಾಲೆ ಕೇಳೈ |
ಇದನು ನಂದಿಪೆವೆನುತ ಪೂರ್ವದೊ |
ಳೊದಗಿ ಬಂದ್ದಾದನುಜ ಶತಯೋಜನನು ಮೊದಲಾದ ||
ಅದುಭುತಾದ್ಭುತ ವೀರರಳಿದರು |
ಚದುರ ತಮ್ಮಯ ಬಲಗಳೊಡನೆಯು |
ಸದರ ವಲ್ಲೈ ನುಂಗಬೇಡೆಂದೆನಲು ಕೋಪದಲಿ || ೪೮ ||

ಕೆಂಡಗಳನುಗುಳುತ್ತ ಲೀಕ್ಷಣ |
ಖಂಡಿಸುವೆನಿದು ಗಣ್ಯವೇಯೆನೆ |
ಮುಂಡಯುನು ತೂಗುತಲಿ ನಮಿಸುತ ನಿಜವಿದೆಂದೆನುತ ||
ಪುಂಡರೀಕಜನರಸಿ ಸರಿಯುಲ |
ಖಂಡಶೌರ್ಯೋದ್ದಂಡ ನಾಕ್ಷಣ |
ಕಂಡನೈ ನಿಂದುರಿವ ಜ್ವಾಲೆಗೆ ಕೋಟಿಮುಡಿಯಾಗಿ || ೪೯ ||

ತಡೆಯು ದಾಕ್ಷಣನುಂಗಿದನು ತಾ- |
ಕಿಡಿಯನುಗುಳುತಲಿರುವ ಜ್ವಾಲೆಯು |
ದಡಗಿದುದು ಪೊಡೆಯೊಳಗೆ ನೋಡುತ ಮುಡಿದನಮ್ಮಗಳ ||
ತೊಡೆದು ಭಸ್ಮವ ಪಡೆದನದರಿಂ |
ನುಡಿದವೇದದ ಒಂದನೆಯುದೀ |
ನುಡಿಯು ಕೇಳಿರಿ ತ್ರಿಯಾಯುಷವೆಂದೆನುತ ಮುತ್ತೆಂಡ || ೫೦ ||

ಮೋದದಿಂ ಜಮದಗ್ನಿ ಕಶ್ಯಪ ।
ರಾದಿಮುನಿಗಳು ನಾವು ಸುರವರ ।
ರಾದರದಿ ವೀರೇಶನಡಿದಾವರೆಗೆವಂದಿಸುತ ॥
ಪೋದೆವತಿ ಜವದಿಂದ ಲಾಗಿರಿ ।
ಯಾದಿಯಲಿ ತಾನತಿಭಯಂಕರ ।
ನಾದಕಾಕೋದರವು ಬಾಯ್ದೆರದಿರ ಲದದ್ಭುತವು ॥ ೫೧ ॥

ದೆಸೆಗಳಿಂಟನು ಸೋಂಕಿಭುವಿಯಾ ।
ಗಸಕೆ ತೆರೆಹೆದು ಗೊಡದಲಿರುತಿರ ।
ಲಸವಸದಿ ಪೊಕ್ಕೆವು ಸರ್ವರೆದು ಪಥವೆಂದು ತಿಳಿಯುದಲೆ ॥
ಸಸಿನದಿಂದದು ಬಾಯುಮುಚ್ಚಲು ।
ಘುಸಣೆಗೊಳ್ಳುತ ಘೋಷಿಸಿದೆವೈ ।
ಅಸಮನಯನನೆ ಪಾಲಿಸೆಂದೆನ್ನುತಲಿಕಂಪಿಸುತ ॥ ೫೨ ॥

ಆರವವ ನಾಲಿಸುತ ವೀರಸ ।
ಮೀರವೇಗದಿ ಬಂದುಬಾಯ್ದೆರೆ
ಕ್ರೂರ ಮುನಿಗಳನೇಕೆ ನುಂಗಿದೆಯೆಂದು ದಂಡಿಸಲು॥
ಆರದಲೆ ಯಾ ದೈತ್ಯಮೇಘಾ ।
ಕಾರವಾಗಲು ಪವನನಾಗುತ ।
ಹಾರಿಸಲು ಗಜವಾಗೆ ಸಿಂಗವದಾಗಿ ತರಿಯಲ್ಕೆ ॥ ೫೩ ॥

ಆಗದೈತ್ಯನು ಮಹಿಷನಾಗಲು ।
ತಾಗಿದನು ಪುಲಿಯಾಗಿ ವೀರನು ।
ನಾಗನಾಗಲು ದನುಜ ಗರುಡವದಾದಶಿವತನಯ ॥
ಆಗೆ ವೃಕ್ಷವು ಪರಶುವಾದವ ।
ನಾಗೆಶೈಲವು ಕುಲಿಶವಾದವ ।
ನಾಗೆ ಮೂಷಕ ಓತುವಾದನು ಭೇಕ ಕಹಿಯಾದ ॥ ೫೪ ॥

ಆಗಲವಘನ ಸಿಂಹವಾಗಲು ।
ಬೇಗಶರಭವದಾಗಿ ಶಿವಸುತ ।
ತಾಗಿ ಕೋಪದಿಪಿಡಿದು ಶೀಳಲಿಕವನ ಗರ್ಭವನು ॥
ಆಗಲವತಾಕಾಳರಕ್ಕಸ ।
ನಾಗಿ ಖಡ್ಗವ ಪಿಡಿದು ಬೊಬ್ಬಿಡೆ ।
ಬೇಗಪಲಕವಕೊಂಡು ತುಡುಕಿದ ವೀರಭದ್ರೇಶ ॥ ೫೫ ॥

ಕಿಡಿಗಳುಗುಳುತ ಲಾಗದನುಜನು ।
ತಡೆಯೆ ಸಮಬಲನಾಗಿ ಸಮರದಿ ।
ಪೊಡೆದನೈ ವೀರೇಶ ನಾರ್ಭಟಿಸುತ್ತ ರೌದ್ರದಲಿ ॥
ಕೆಡೆದು ದಾನವ ಮುನ್ನಿನೊಲು ತಾ ।
ನೊಡನೆ ಚಕ್ಷುಶ್ರವವದಾಗಲು ।
ಪಿಡಿದು ತುಟಿಗಳನೆರಡು ಶೀಳಿದ ವೀರವೀರೇಶ ॥ ೫೬ ॥

ಮಡಿಯಲಾಕ್ಷಣ ವ್ಯಾಳ ದೈತ್ಯನು ।
ಒಡನೆ ನಮ್ಮೆಲ್ಲರಿಗೆ ಭಸ್ಮವ ।
ತೊಡೆದು ಶಿವಮಂತ್ರವನು ನುಡಿಯುತಲಸುವನೀಯಲ್ಕೆ ॥
ಒಡನೆ ವೀರೇಶ್ವರನ ಘನಪದ ।
ಜಡಜಗಳಿಗೊಂದಿಸುತ ಧನ್ಯತೆ ।
ವಡೆದೆವಿದುವೇ ತ್ರಿಯಾಯುಷವೆಂಬೆರಡನೆಯ ಶೃತಿಯು ॥ ೫೭ ॥

ಇಂತು ಬಂದಾಕಂಟಕಂಗಳ ।
ನಂತುದಾಂಟದೆ ವೆರಡನೆರಡನೆ ।
ಕಂತುಮದಹರ ವೀರಭದ್ರೇಶ್ವರನ ಕರುಣದಲಿ ॥
ಸಂತಸದಿ ಕೆಲಕಾಲ ಕಳೆಯಲು ।
ದೆಂತು ಪೇಳಲಿ ತರುಣಿಕೇಳಾ ।
ಬಂತು ಮತ್ತೊಂದೆಮಗೆ ವಿಪದವದೆನುತಲುಸುರಿದನು ॥ ೫೮ ॥

ವಾಮನದರೆಸು ವಿಜುವರ್ಮಾಯುಸ ।
ಭಾಮಿನಿಯುಬುಜುನ್ಮೆರ್ಯುಳ ಗರ್ಭದಿ ।
ಭೂಮಿ ಭಾರಕಹಸ್ತದ್ವಾದಶಕರ್ಣಷೋಡಶದಿ॥
ಆ ಮುಖಾಷ್ಟಕ ವೆಂಟುದಂಷ್ಟ್ರದಿ ।
ಭೀಮ ರೂಪದಿ ನೇತ್ರಷೋಡಶ ।
ವಾಮಹಾಷಟ್ಪಾದ ಮುದಿಸಿದ ಪಂಚಮೇಢ್ರನುತ ॥ ೫೯ ॥

ಪನ್ನೆರಡು ಪನ್ನೆರಡು ಯೋಜನ ।
ದುನ್ನತದ ದಶವೃಷಣಂಗಳಿರುತಿರ ।
ಲಿನ್ನುಬಾಧಿಸುತಿರ್ದ ಮೂಜಗಗಳನು ಗರ್ವದಲಿ ॥
ಗನ್ನಘಾತಕನೊಂದುದಿನ ಕರಿ ।
ಯುನ್ನು ನುಂಗಿದ ಸುರಪಸಹಿತದಿ ।
ತನ್ನಯಾ ಗರಿಮಂತ್ರದಲಿ ತನುಶೀಳ್ದುಹೊರಬಂದು ॥ ೬೦ ॥

ಸುರೆಪ ನೈರಾವತವ ಪತ್ತುತ ।
ಹರನ ಸಭೆಗೈದಲ್ಕೆ ಶುಕ್ರನು ।
ಭರದೊಳಸುವಿತ್ತಭವ ನೊಲಿಸೆಂದೆನುತ ಕಳುಹಲ್ಕೆ ॥
ಸುರವಿರೋಧಿಯು ಘೋರತಪಕಾ ।
ಹರನು ಮೆಚ್ಚುತವರವ ಬೇಡೆನೆ ।
ಪರಮ ಹರುಷದೊಳೆರಗಿ ನುತಿಸುತನಿಂದು ಕರಮುಗಿದು ॥ ೬೧ ॥

ಮರಣವಾಗದ ವರವಪಾಲಿಸು ।
ಭರದಿನುಂಗಿದುದೆಲ್ಲವೆನ್ನಯು ।
ಶರೀರದಲೆ ತಾ ಭಸ್ಮವಾಗಲಿ ಸಕಲಸಂಪದವ ॥
ಕರುಣಿಪುದು ನೀನೆಂದುಬೇಡಲು ।
ಅರರೆ ಜನಿಸಿದರಿಂಗೆ ಧರೆಯುಲಿ ।
ಮರಣತಪ್ಪದು ಯನ್ನನಯುನಜನಿಂದಲಳಿವೆಯೆನೆ ॥ ೬೨ ॥

ಫಾಲಲೋಚನದಿಂದ ಉದಿಸುವ ।
ಕಾಲವೆಂದಿಗೊಯೆನುತ ಹರುಷವ ।
ತಾಳಿಬಂದಖಿಳರನು ಬಾಧಿಸುತೊಂದುದಿನದಲ್ಲಿ ॥
ವಾಲಿಸುಗ್ರೀವ ರೊಳುಘನವಹ ।
ಕಾಳಗವತಾ ಗೈಯುತವರನು ।
ಲೋಲಬೆಣ್ಣೆಯ ಮುದ್ದೆಯಂದದಿ ನುಂಗಿದನು ಜವದಿ ॥ ೬೩ ॥

ಅಂದು ನಾವುಗಳೆಲ್ಲ ಮುನಿಗಳು ।
ಇಂದು ಧರನೋಲಗಕೆ ದರುಶನ ।
ಕೆಂದುಪೋಗುತಲಲ್ಲಿ ಸಮರದೊಳಸಮಬಲವಾಲಿ ॥
ಇಂದು ಈದನುಜನನು ಕೊಲ್ಲುವ ।
ಮುಂದೆ ಲೋಕಕೆ ಧಾಳಿತಪ್ಪುವು ।
ದೆಂದುನಿಂದವರಾಗ ಗತಿಯೇ ನೆನುತಲೋಡಿದೆವು ॥ ೬೪ ॥

ಹಿಂದೆ ಪಾವಕವ್ಯಾಳದಾನವ ।
ರಿಂದಲುಳುಹಿದ ನಮ್ಮನೆಲ್ಲರ ।
ತಂದೆ ಶ್ರೀಗುರು ವೀರಭದ್ರೇಶ್ವರನುದಯದಿಂದ ॥
ಇಂದು ಪಾಲಿಪರಾರು ಗತಿಯೇ ।
ನೆಂದು ಶಿವಧೋಯೆನುತ ಕೂಗಲಿ ।
ಕಂದು ಪಿಡಿದೆಲ್ಲರನು ನುಂಗಿದನೆಂಟುಕರದಿಖಳ ॥ ೬೫ ॥

ಮೊರೆಯ ಕೇಳುತ ವೀರಭದ್ರೇ ।
ಶ್ವರನು ಬರುವನಿತರಲಿ ದೈತ್ಯನು ।
ಶರಧಿ ಜಲವನು ಪೀರ್ದುಕೊಬ್ಬಿಲಿ ನಿದ್ರೆಗೈವುತಿರೆ ॥
ಧರದೆತಂದ್ದೈವತ್ತು ಗಾವುದ ।
ವಿರುವಗಿರಿಯನು ಹಾಯ್ಕಲವತುದಿ ।
ವೆರಳಿ ಲೊಗೆದಾವರ್ಭಕಿಚ್ಚೇಬೆರಣಿ ಯಂದಾಡ್ಡ ॥ ೬೬ ॥

ಗಿರಿಯುದಾಗಸದೆಡೆಗೆ ಪಾರಿದು ।
ದರರೆತರಗೆಲೆಯುಂದದಲಿಯುದ ।
ನರಿದು ವಿಸ್ಮಯಬಡುತ ವೀರೇಶ್ವರನು ಭಲಭಲರೆ ॥
ದುರುಳರಕ್ಕಸ ತಡೆಯೆನುತಘನ ।
ಗಿರಿಯುಮುತ್ತೊಂದಿಡಲಿ ಕಾಕ್ಷಣ ।
ಪರಿಯೆಶಿರವೊಂದುಳಿದ ವೇಳ್ಮೆರದಿಂದಲೇಳ್ದ ಖಳ ॥ ೬೭ ॥

ಪರಿದಶಿರದಿಂರುಧಿರ ಬೀಳಲು ।
ಧರೆಗೆಯುವನಂದದಲಿ ದೈತ್ಯರು ।
ಭರದೆಪುಟ್ಟಿದರದು ನಿಮಿತ್ಯದಿ ರುಧಿರ ಬೀಳದೊಲು ॥
ಪರಿದಶಿರವನು ಕಂಠಮೂಲೆಗೆ ।
ಧರಿಸಿನಿಲ್ಲಲುಕಂಡು ರಕ್ಕಸ ।
ನರರೆ ನೀನಾರೆನ್ನ ಶಿರವನುತರಿದ ವೀರಸನೆ ॥ ೬೮ ॥

ಎಲೆದನುಜ ಸುರಮುನಿಗಳನು ನೀ ।
ಛಲದಿ ನುಂಗಿದಬಲವು ತೋರೈ ।
ಮಲಹರಾಂಶನು ವೀರಭದ್ರನು ನಾನುಎಂದೆನಲು ॥
ಭಲರೆ ಲೇಸಾಯ್ತೆನ್ನ ಯನುಪಮ ।
ಬಲಕೆಸಮುಕಲಿಗಳನು ಕಾಣದೆ ।
ನೆಲದೆ ತೊಳಲಿದೆ ಬಳಲಿದೆನು ನಾನಿಂದು ವರೆಗೆನುತ ॥ ೬೯ ॥

ಅಂದು ತನ್ನಯ ಖಡ್ಗವೆರಡರೊ ।
ಳೊಂದು ವೀರೇಶ್ವರನಿಗೀಯುತ ।
ಲೊಂದುಖಡ್ಗವ ಕೊಂಡುನಿಂದನು ಬಹಳಗರ್ವದಲಿ ॥
ಒಂದುಗಾವುದವಗಲ ನೀಳವು ।
ಚಂದದಿಂದೈವತ್ತುಗಾವುದ ।
ದಂದ್ವದಾ ಖಡ್ಗಗಳಲೊಡೆದಾಡಿದರು ಶೌರ್ಯದಲಿ ॥ ೭೦ ॥

ವತ್ಸರವು ಕಾದಿದರು ಖಡ್ಗದಿ
ವತ್ಸರವು ಕಾದಿದರು ಗದೆಯಲಿ । ।
ವತ್ಸರವು ಕಾದಿದರು ಸುರಗಿಸಬಳ್ಳಾದ್ಯಾಯುಧಂಗಳಲಿ ॥
ವತ್ಸರವು ತಾವ್ ಮುಷ್ಠಿ ಮುಷ್ಠಿಯಲಿ
ವತ್ಸರವು ತಾವ್ ಕೇಶಕೇಶಿಯಲಿ । ।
ವತ್ಸರವು ನಾಲ್ಕಾಗೆ ಕೊಂಡರು ಮತ್ತೆ ಖಡ್ಗಗಳ ॥ ೩೧ ॥

ದಿಗ್ಗಜಗಳೊದರಿದವು ಶೇಷನು ।
ಬಗ್ಗಿದನು ಬಲಶಾಲಿ ಕೂರ್ಮನು । ।
ತಗ್ಗಿದನು ನುಡಿಯಾಯ್ತು ಜಾಂಡವು ತುಳಿತ್ರಕಾರಡಲಿ ॥
ಸಗ್ಗದರಸಾ ದೃಗ್ಗಿ ಮೊಗದರು । ।
ನಗ್ಗಿದರು ಕುಗ್ಗಿದರು ಹಿಗ್ಗದು । ।
ತಗ್ಗಿದುದು ದನುಜೇಂದ್ರನನು ಪುಮಶೌರ್ಯಸಾಹಸಕೆ ॥ ೩೨ ॥

ಘುಡು ಘುಡಿಸಿ ವೀರೇಶ ಖಡ್ಗದಿ
ಕಡಿದನೈ ಮತ್ತೆರಡು ತಲೆಗಳ । ।
ಕೆಡೆಯುದಂದದಿ ರಕ್ತಪೋಷಣೆಯೊಳಗಡಗಿಸಲ್ಕಾಗ ॥
ಜಿಡದೆ ರಕ್ಕಸ ಪಂಚಶಿರದಲಿ । ।
ತುಡುಕಿ ವೀರೇಶ್ವರನ ಪೊಯ್ಯಲು ॥
ಕಿಡಿಗಳುಗುಳುತ ನಿಂದವದ್ಭುತರೂಪತಾಳುತಲಿ ॥ ೩೩ ॥

ಭೂಗಗನ ಕೊಂದಾಗಿ ನಿಲ್ಲುತ ।
ಲಾಗ ಕೇಳೆಲೊ ಭ್ರಷ್ಟ ದೈತ್ಯನೆ । ।
ಬೇಗ ತೋರೆಲೊ ನಿನ್ನ ಭುಜಬಲ ಶೌರ್ಯಸಾಹಸವ ॥
ರಾಗದಿಂ ನಿನ್ನೊಳು ವಿನೋದವ । ।
ದಾಗೆ ಸಮರವಗೈದೆನದರಿಂ । ।
ಬೇಗ ನೋಡೆಂದೆನುತ ಪೊಯ್ದನು ತುಳ ಕೋಪದಲಿ ॥ ೩೪ ॥

ಪಿಡಿದೆಳದು ಕೌಂಕುಳದೊಳೌಂಕುತ |
ಲೊಡನೆ ಖಡ್ಗವಕಸಿದು ರೌದ್ರದಿ |
ಹೊಡೆದು ಕೆಡೆಹಿದ ನೈದುತಲೆಗಳ ನಾಕ್ಷಣಾರ್ಧದಲಿ ||
ಒಡನೆನಾರದ ನೋಡುತಿದನತಿ |
ಸಡಗರ ದೊಳೋಡುತ್ತ ಮೃಡನಡಿ |
ಜಡಜಗಳಿಗೊಂದಿಸುತಲಿರುಹಿದನತುಲ ಸಂಭ್ರಮದಿ || ೭೫ ||

ಚ್ವಾಲದೈತ್ಯನ ದಹಿಸಿ ಮತ್ತಾ |
ವ್ಯಾಳದನುಜನ ಹತಿಸಿ ಇಂದಾ |
ಖೂಳದಾನವ ಪಂಚಶೀರ್ಷಾಸುರನ ಶೀಳುತಲಿ ||
ಪಾಲಿಸಿದನಖಿಳಮರ ಮುನಿಗಳ |
ಪೇಳಲಸದಳ ಶೌರ್ಯಸಾಹಸ |
ಲೀಲವಮೋರುತ ವೀರಭದ್ರೇಶ್ವರನದೆಂದೆನುತ || ೭೬ ||

ದೇವಿಗಿರಿ ಜಾತೆಯುರ ಸಹಿತದಿ |
ತಾವು ಚಿತ್ತೈಸುತಲಿ ಹರುಷವ |
ನೀವುದೈ ಘನರೌದ್ರದಿಂದಿಹ ದೇವರಿಂಗೆನಲು ||
ಭಾವಜಾಂತಕನಮಿತ ಮೋದದಿ |
ಕಾವಪಿತಸಿದ್ಧಿಯೂದಿಸುರರೊಡ |
ನಾವಿನುಲ ವೀರೇಶನೆಡೆಗೈದಿದನು ಶಿವೆಸಹಿತ || ೭೭ ||

ನಂದಿಕೇಶನ ಪತ್ತಿಪ್ರಮಥರ |
ವೃಂದಸಹಿತದಿ ತೆರಳೆನಾರದ |
ಮುಂದೆಮುಂದೆಯು ಬಂದುತೋರಲು ಕಂಡು ಶಂಕರನು ||
ನಂದನನಬಿಗಿಯುಪ್ಪಿ ಚುಂಬಿಸ |
ಲಂದು ಕಾತ್ಯಾಯನಿಯುಸಹಿತದಿ |
ಪೊಂದಿಸುತ ಕರಮುಗಿದು ಜಯಜಯವೆಂದು ದಮರಗಣ || ೭೮ ||

ಜಯಜಯತು ಕರುಣಾ ಸಮುದ್ರನೆ ।
ಜಯಜಯತು ಘನ ರೌದ್ರರೂಪನೆ ।
ಜಯಜಯತು ದುರ್ಭೇದ್ಯ ದೈತ್ಯಾಂತಕನೆ ಭೀಕರನೆ ॥
ಜಯಜಯತು ದಕ್ಷಾಧ್ವರಾಪರ ।
ಜಯಜಯತು ನರಹರಿಯ ಮದಹರ ।
ಜಯಜಯತು ಜಯತೆಂದು ಪೊಗಳಿದರಿಂದ್ರ ಹರಿಯಜರು ॥೭೯॥

ಹರಿವಿಧಿಯು ಜಮದಗ್ನಿ ಕಶ್ಯಪ ।
ಸುರಪನಾಗಸ್ತ್ಯಾದಿಗಳಿಗತಿ ।
ಹರುಷದಿಂದಲಿ ಪರಮಪಾವನ ವೇದಪುರುಷನಿಗೆ ॥
ವರತ್ರಿಯಾಯುಷ ಮಂತ್ರವನು ಘನ ।
ಕರುಣನಿಧಿ ವೀರೇಶ ನರುಹಿದ ।
ವರವಿಭೂತಿಯ ಮಹಿಮೆ ಕೇಳ್ದರಿಗಹುದು ಸಂಪದವು ॥ ೮೦ ॥

ಪೇಳಲಂದು ದಧೀಚಿಮುನಿವರ।
ಕೇಳಿ ಹರುಷದೊಳಾಶುಚಿಸ್ಮಿತೆ ।
ತಾಳಿಸಂತಸ ಭಜಿಸಿದಳು ವೀರೇಶನಡಿಗಳನು ॥
ಪೇಳಲತ್ತಲು ಶಂಭು ಭಟ್ಟನು ।
ಕೇಳಿರಾಮನು ಧನ್ಯನಾದೆನು ।
ಪೇಳಲೊಶವಲ್ಲಕ್ಕೆ ವೀರೇಶಂಗೆ ಜಯವೆಂದ ॥ ೮೧ ॥

ಭೂತನಾಥನ ಚತುರ್ಥಾಸನ ।
ದೋತುಸಂಜನಿಸುತ್ತ ಜಗದಿ ಪು ।
ನೀತನೆಂದೆನ್ನಿಸುತ್ತ ವಿಖ್ಯಾತಿಯನು ಪೊಂದುತಲಿ ॥
ಪ್ರೀತಿಯಿಂ ಪೂಜಿಪರ ಮನ ದಿ ।
ಸ್ವಾರ್ಥವೀವನುಪಮನೆ ಪಾಲಿಸು ।
ಭೂತಭಕ್ತರ ಶ್ರೀಜಗದ್ಗುರು ಪಂಡಿತಾರಾಧ್ಯ ॥ ೮೨ ॥

ವೀರಭದ್ರೇಶ್ವರನ ಮಹಿಮೆಯ ।
ಭೂರಿಭಕುತಿಯಲಿಂದ ಸಂತತ ।
ವಾರು ಪೂಜಿಸುತಿಪರೊ ಪಠಿಸುತಲಿಹರೊ ಪೇಳುವರೊ ॥
ಸಾರಿಕೇಳುವರೆಲ್ಲರಿಗೆ ಮನ ।
ಪಾರಭೀಷ್ಟವನಿತ್ತು ಪಾಲಿಪ ।
ಮಾರರಮಣ ವಿಧಿ ಸುರಪಯಕ್ಷೇಶಾದಿವಿನುತಶಿವ ॥ ೪೩ ॥

ನಾಲ್ಕನೇ ಸಂಧಿ ಸಂಪೂರ್ಣ

ಅಂತು ಸಂಧಿ ೪ ಕ್ಕೊಂ ಪದನ್ನು ೨೯೬ ಕ್ಕಂ

ಮಂಗಳ ಮಸ್ತು



ಶ್ರೀ ವೀರಭದ್ರೇಶ್ವರಃ ಪ್ರಸನ್ನಃ

# ಶ್ರೀ ವೀರಭದ್ರೇಶ್ವರ ಪುರಾಣ





## ಐದನೇ ಸಂಧಿ

### ಭಾಮಿನೀ ಷಟ್ಪದಿ

ಮರುತಜನ ಘನತಪಕೆ ಮೆಚ್ಚುತ ।
ಪರಮಲಿಂಗವನೀಯುತಷ್ಟಾ
ವರಣ ಮಹಿಮೆಯ ಬೋಧಿಸಿದನ್ನೆ ವೀರಭದ್ರೇಶ ॥

ಕಾಮನಿಂದನುಮತಿಯ ಪಡೆಯುತ ।
ಲಾಮಹಾಸುರಮುನಿಯ ನೇಮದಿ
ತಾಮಹಾಛಕುತಿಯೊಳು ಘನತಪಗೈದ ಮೂರುತಿಗೆ ॥
ನೀ ಮುದದಿದರುಶನವನೀಯುತ ।
ಲಾಮಹಾ ವರದಿಷ್ಟಲಿಂಗವ ।
ಪ್ರೇಮದಲಿ ಪಾಲಿಸಿದ ವೀರೇಶ್ವರನೆ ರಕ್ಷಿಪುದು ॥ ೧ ॥

ಭದ್ರಮೂರುತಿ ನಿಮ್ಮನೆನೆಯಲು ।
ರುದ್ರನಧ್ಯಾಯವನು ಪಠಿಸಲು ।
ಕ್ಷುದ್ರ ಭೇತಾಳಾದಿಭೂತಗಳಖಿಲ ಭಯಪರವು ॥
ರೌದ್ರರೂಪದ ಶಮನಭಯವೆನಿ ।
ಪದ್ರಿಚಯಘನ ಪವಿಯೆ ಪೊರೆಯೈ ।
ಭದ್ರಕಾಳೀಪತಿಯೆ ಸಂತತವತುಲ ಸಂತಸದಿ ॥ ೨ ॥

ಧರಣಿಪತಿ ಶ್ರೀರಾಮಚಂದ್ರನ ।
ತರುಣಿಸೀತೆಯನೊಯ್ದು ರಾವಣ ।
ಸರಿದುಶೋಕಿಸುತಿರಲು ಬಂದಾಕುಂಭಸಂಭವನು ॥
ಅರುಹಿದನುತಿಳಿ ರಾಮತನುವಿದು ।
ನಿರುತವೇನೈ ನಾರಿಹಂಬಲ ।
ಮರೆದುವಿರತಿಯ ಪೊಂದಿ ಪಡೆ ನೀನಿತ್ಯಪದವೆನಲು ॥ ೩ ॥

ಮುನಿಪಸತ್ಯವಪಾಥರೆನ್ನಯ ।
ಘನತೆಗದು ಕುಂದಲ್ಲವೇನೈ ।
ವಿನುತ ರವಿವಂಶದಲಿಪಂದೆಯ: ಜನಿಸಿದನೆ ಎನುತ ॥
ಎನರೆ ಜನರಪಕೀರ್ತಿಯದುತಾ ।
ದಿನಶಶಿಗಳುಳ್ಳನ್ನ ಪೋಪುದೆ ।
ಘನುಜನಸುಕೊಂಬನ್ನ ಸ್ವೈರಣೆಯಾಗದೆನಗೆನಲು ॥ ೪ ॥

ರಾಮಕೇಳ್ ರಾವಣನಶೌರ್ಯೋ ।
ದ್ದಾಮ ಸತ್ವಗಳಮಿತ ತಿಳಿನಿ ।
ಸ್ಸೀಮ ಮೂಯೂವಿಗಳು ಸಚಿವರು ಸುತರು ಸೋದರರು ॥
ಭೂಮಿಯೊಳಗಿಂದವನ ಜೈಸುವ ।
ಭೀಮವಿಕ್ರಮರಿಲ್ಲ ವೆಂದೆನೆ ।
ಪ್ರೇಮದಿಂದಾದನುಜನಸುಗೊಂಬಂದ ಪೇಳೆನಲು ॥ ೫ ॥

ತರಣಿವಂಶಜ ಕೇಳುತಪದಲಿ ।
ತರುಣ ಶಶಿಶೇಖರನ ಮೆಚ್ಚಿಸಿ ।
ಘುರುಳದೈತ್ಯನ ತರಿವಪಾಶುಪತಾಸ್ತ್ರ ಪಡೆಯನಲು ॥
ಕರುಣದಲಿತಪಗೈವ ಪಥನೀ ।
ನರುಹಿ ಧನ್ಯನಮೊಳ್ಪು ದೆಂದೆನೆ ।
ಘರುಷದಿಂದಲಿ ವಿರಜದೀಕ್ಷೆ ನೀಯುತಾಕ್ಷಣದಿ ॥ ೬ ॥

ಬೋಧಿಸಿದ ಶಿವಮಂತ್ರವನು ತಾ ।
ಸಾದರದೆ ಋಷಿಛಂದದೇವತೆ ।
ಯಾದಿ ಕೀಲಕ ಶಕ್ತಿಮೊದಲಾದಖಿಳವಿವರವನು ॥
ಮೋದದಿಂದರುಪುತ್ತ ಕೇಳ್ಕೆ ।
ಮೇದಿನೀಶನೆ ಬಿಡದೆನೇನ್ನುದ್ಧಿ ।
ಸಾಧಿಸುದು ಶಿವನೊಲಿದು ಕರುಣಿಪನೆಂದು ಕಳುಹಲ್ಕೆ ॥ ೭ ॥

ರಾಮಚಂದ್ರನು ಗೌತಮಿಯತಟ ।
ದಾಮಹಿಂತ ಮಹಿಮೆಯಲಿ ಮೆರೆಯುವ ।
ರಾಮಣೀಯಕ ರಾಮಗಿರಿ ಸುಕ್ಷೇತ್ರದಲಿ ನಿಂದು ॥
ಪ್ರೇಮದಲಿ ಸ್ನಾನವನು ಗೈದಾ ।
ನೇಮದಲಿ ಭಸಿತಾಕ್ಷಮಾಲೆಯ ।
ತಾಮುದದಿ ಧರಿಸುತ್ತ ಘನತಪಗೈದು ಶಿವನೊಲಿಸಿ ॥ ೮ ॥

ಪಡೆದು ತಾ ಪಾಶುಪತಶರವನು ।
ನಡೆದು ಕಿಷ್ಕಿಂಧೆಯಲಿ ಮರುತಜ ।
ನೊಡನೆ ಬರೆಸುಗ್ರೀವ ಸಖ್ಯವದಾಗೆ ನಂತರದಿ ॥
ಜಡಧಿಯನು ಬಂಧಿಸುತರಣದಲಿ ।
ಕೆಡಹಿ ರಾವಣನನ್ನು ಸೀತೆಯ ।
ಪೃಡನ ಪರಿಕಿಸಿ ಬಂದಯೋಧ್ಯೆಯೊಳತುಳ ಹರುಷದಲಿ ॥ ೯ ॥

ತಾರತಮ್ಯವನರಿದು ಮುದದಲಿ ।
ಗೌರವಿಸುತವರವರಿ ಗುಚಿತವ ।
ನಾ ರಘೂದ್ವಹನಿತ್ತು ಬಳಿಕಾವೀರಹನುಮನಿಗೆ ॥
ಭೂರಿ ಧನಕನಕಾದಿ ವಸ್ತ್ರಗ ।
ಳಾರಯಿದು ತಾನೀಯೆಮನಕದು ।
ತೋರದಿರೆ ಮಾರುತಿಯು ನತಿವಿನಯದಲಿ ಪೈದಡವಿ ॥ ೧೦ ॥

ಅತಿಬಲಾತ್ಮಜ ನಿನ್ನಯತಿಬಲ ।
ದತುಲ ಸಾಹಸದಿಂದ ನಾನೀ ।
ಕ್ಷಿತಿಯೊಳಿಂದಿನ ಕಂಡೆನ್ನೈ ಧರೆಯಾಧಿಪತ್ಯವನು ॥
ಮತಿಯುತನೆ ನಿನಗೇನನೀಯಲಿ ।
ಮತಿಗೆ ಗೋಚರವಾಗದೆನ್ನಗೆ ।
ಹಿತವದೇನಿದೆ ಬೇಡು ಬೇಡೈಮುದದಿ ನೀನೆನಲು ॥ ೧೧ ॥

ನಶ್ವರವು ತಾನಷ್ಟಸಂಪದ ।
ನಶ್ವರವುತಾ ಸ್ವರ್ಗಸೌಖ್ಯವು ॥
ನಶ್ವರವು ಧರೆನಾರಿಶಿರಿಯಾದಿಗಳು ತಿಳಿಯಲೈ ॥
ನಶ್ವರದ ಫಲವಾವನೊಲ್ಲೆನು ।
ಶಾಶ್ವತದ ಕೈವಲ್ಯ ಪದವಿಯು ।
ಭಾಸ್ವತನ್ವಯ ದೀಶ ನೀನಿತ್ತೆನ್ನ ಪೊರೆವುದೆನೆ ॥ ೧೨ ॥

ರಾಮನಚ್ಚರಿವಡುತಿ ದೇನೈ ।
ಭೀಮವಿಕ್ರಮ ನಿನ್ನಭೀಷ್ಟವು ।
ಕಾಮುಪಿತ ವಿಧಿಗಳ್ಗಭೇದ್ಯವದೆನ್ನ ಗೆಂತಳವೈ ॥
ಶ್ರೀಮಹಾಗುರುದೇವನನುಪಮ ।
ರಾಮಣೀಯಕ ಪಾದಪಂಕಜ ।
ವೀಮಹಾಘನತರ ಭವಾಂಬುಧಿಚ್ಛೈತ್ರ ತಿಳಿಪವನಿ ॥ ೧೩ ॥

ಪರಮ ಭಕುತಿಯುಲಿಂದ ಗುರುಪದ ।
ಸರಸಿಜವ ಸೇವಿಸುವನೀ ಭವ ।
ಶರಧಿಯನು ದಾಂಟುವನು ಕೇಳ್ನೀನದು ನಿಮಿತ್ತದಲಿ ॥
ಪರಮ ಪಾವನ ಗುರುವಿನಂಘ್ರಿಯ ।
ನೆರೆ ಸುಭಕುತಿಯುಲಿಂದ ಸೇವಿಸಿ ।
ಪರಿವುದೈ ಘನಭವದ ಪಾಶವನತಿ ವಿರಾಗದಲಿ ॥ ೧೪ ॥

ಅದುನಿಮಿತ್ತದಿ ನೀನುಸದ್ಗುರು ।
ಪದವ ಸೇವಿಸಿಧನ್ಯನಾಗೆನೆ ।
ಕುದಿವಚಿಂತಾಗ್ನಿಯಲಿ ಕರಗಳ ಮುಗಿದು ವಿನಯದಲಿ ॥
ಪದಕೆರಗಿ ನಂಬಿರುವೆ ನಿನ್ನಯ ।
ಪದಪಯೋಜವ ನೀನೆಸರ್ವವು ।
ಪದುಳದಿಂಪಾಲಿಪುದು ಬೇರಾರಿಹರುಗುರುದೈವ ॥ ೧೫॥

ಆರನಾನರಸುತಲಿ ತೊಳಲಿ ।
ಆರ ನಾಗುರುವೆನ್ನುತರಿಯಲಿ ।
ಆರಸೇವೆಯ ಗೈಯಲ್ಕೆ ನಾ ನಿನ್ನನತಿಗಳೆದು ॥
ಆರನೀತೋರದಲೆ ದಯದಿಂ ।
ಪಾರುಗೊಳಿಸುವುದೆನ್ನ ನೆನುತಲಿ ।
ಸಾರಿಪದ ಸರಸೀರುಹಂಗಳ ಪಿಡಿದಪವನಜಗೆ ॥ ೧೬ ॥

ಮಾತರಿಶ್ವಾತ್ಮಜನೆಕೇಳ್ಕೆ ।
ಪೂತಗುರುವಿನ ಪಾದಪಿಡಿದು ಪು ।
ನೀತನಾಗ್ಯೆ ಸತ್ಯಸತ್ಯವಿದೆನ್ನಗಳವಲ್ಲ ॥
ನೀತಿವಂತನೆ ನಿನ್ನೊಳೆನಗತಿ ।
ಪ್ರೀತಿಯುಂಟೆಂಬುದನು ಮರೆದು ಯಿ ।
ದೇತಕೀಪರಿ ಪರಿಕಿಸುತ್ತಿಹೆ ನಂಬದಲೆ ನೀನು ॥ ೧೭ ॥

ಗುರುವಿನಿರವನು ಪೇಳಲಳವೇ ।
ತರಣಿ ತಿಮಿರವ ಹರಿಸುವಂದದಿ ।
ನರನಹೃದಯದ ಕತ್ತಲೆಯತಾಜ್ಞಾನರವಿಯಿಂದ ॥
ಪರಿಹರಿಸಿ ಸಂಸಾರಶರಧಿಯ ।
ಭರದಿದಾಂಟಿಪ ಛೈತ್ರರೂಪದ ।
ಶರಿರದಿಂದಾತ್ಮನನುತನ್ನುರು ತರೆದ ಕರುಣದಲಿ ॥ ೧೮ ॥

ಎಂದು ಹೇಳಿದ ರಾಮಚಂದ್ರನಿ ।
ಗೊಂದಿಸುತ ಕರಮುಗಿದು ಹಂಗುವಿ ।
ಗಂದವಹಪದ ಬಂದವೊಲು ಪುಟ್ಟಂಧಕಗೆ ನಯನ ॥
ಬಂದ ತೆರನವದಾದುದೈ ಯನ।
ಗಿಂದು ನಿಮ್ಮುಪದೇಶದಿಂ ಭವ ।
ಬಂಧನವ ಪರಿಹರಿಪ ಗುರುವರನಡಿಯ ಸೇರುತಲಿ ॥ ೧೯ ॥

ಹರಿಸುವೆನು ನಾಭವವ ನೀನತಿ ।
ಪರುಷದಿಂ ಪರಸುತ್ತಲೆನ್ನನು ।
ಕರುಣಿಸುವುದನುಮತಿಯ ನೆಂದೆನಲಾಗ ಸಂತಸದಿ ॥
ದೊರೆಯಲ್ಯೆ ಸದ್ಗುರುವು ನಿನ್ನಗೆ ।
ಪರಿಯಲ್ಯೆಭವಬಂಧನವು ಭವ ।
ಹರನು ಕರುಣಿಸಲೆಂದು ಹರುಷದಿಪರಸಿ ಕಳುಹಿದನು ॥ ೨೦ ॥

ಅತ್ತನಾರದ ನರಿದು ಪವನಜ ।
ಗುತ್ತಮೋತ್ತಮ ಗುರುವತೋರ್ಪನಿ ।
ಮಿತ್ತಬಂದನು ಯೋಚಿಸುತ ಭೂತಳಕೆ ವೇಗದಲಿ ॥
ಇತ್ತಮಾರುತಿ ರಾಮನನುಮತಿ ।
ವೆತ್ತುಬರುತಲಿ ಕಂಡುಮಾರ್ಗದೊ ।
ಳುತ್ತಮಾಂಗವಚಾಚಿ ನಿಂದನು ನಾರದನ ಪದಕೆ ॥ ೨೧ ॥

ಏಕೆ ಮಾರುತಿವದನವದು ತಾ ।
ನೇಕೆ ಬಾಡಿದೆ ದುಗುಡವದು ತಾ ।
ನೇಕೆ ಮುಸುಕಿದೆಮನದಿ ಚಂಚಲವೇಕೆ ಚಿತ್ತದಲಿ ॥
ಏಕೆಬೆದರಿದ ಹರಿಣನಂದದೊ ।
ಳೇಕೆ ನಾಲ್ದೆಸೆಗಳನು ನೋಡುವೆ ।
ಏಕೆಮತ್ತೇನಾದುದೈ ವಿಪರೀತ ಹೇಳೆನಲು ॥ ೨೨ ॥

ಯೋಗಿಗಳತಲೆವಣಿಯೆ ನಾಭವ ।
ರೋಗಪರಿಹರಗೈವ ಗುರುಪದ ।
ವೀಗಳರಸುತಬಂದೆನೈ ಯೆನಲೇಕೆರಾಘವನು॥
ನೀಗದೋದನೆಭವವನೆಂದೆನೆ ।
ರಾಗಭೋಗ ವಿಲಾಸವಿಭ್ರಮ।
ನಾಗಿಸುಖಿಸುವ ಮನುಜನಾ ನಿನಗೆಂತುಗುರುವಹೆನು ॥ ೨೩ ॥

ಎನಗಿದಳವಲ್ಲಯ್ಯಮಾರುತಿ।
ಘನ ಗುರುವನಾಶ್ರೈಸಿ ಹರುಷದಿ ।
ವಿನುತಮುಕುತಿಯುಪಡೆದು ಸುಖಿಸುವುದೆನುತಪೇಳಲ್ಕೆ ॥
ಜನನಮರಣವಿದೂರ ನೆಂದೆನಿ ।
ಪನಘನದ್ವಯನತುಲಗುರುಪದ।
ವನಜವರಸುತಬಂದೆನೈ ನಾನದುನಿಮಿತ್ತದಲಿ ॥೨೪॥

ಅಟವಿಯಲಿ ಗಿರಿಕಂದರಗಳಲಿ।
ವಿಟಪಿಗಳಛಾಯೆಯಲಿ ಸುರನದಿ ।
ತಟಗಳೊಳಗರಸುತಲಿಬಂದೆನು ದೇವಮುನಿಪತಿಯೆ ॥
ಕುಟಿಲಕುಹಕರತರಿದುಸುಜನರ ।
ಕಟಕವನುಪಾಲಿಸುವ ತವಪದ ।
ತಟವಕಂಡೆನುದೇವ ಗುರುಪದತೋರಿಪಾಲಿಸನೆ ॥ ೨೫ ॥

ರಾಮನೇ ಕಳುಹಿದನೆನಿನ್ನನು ।
ಭೀಮವಿಕ್ರಮಕೇಳು ರಿಪುನಿ ।
ರ್ಧೂಮನೆಲಸಿಹ ನಮಲಪಂಪಾಕ್ಷೇತ್ರದೆಡೆಯಲ್ಲಿ ॥
ಕಾಮಿತಾರ್ಥದಕರುಣಸಾಗರ ।
ನಾಮಹಾ ಭಕ್ತೇಷ್ಟದಾಯಕ ।
ಸೋಮಶೇಖರನಗ್ನಿನೇತ್ರಜ ವಿರಭದ್ರೇಶ ॥೨೬॥

ಘನಮಹಿಮ ಶಿಷ್ಟೌಘ ದುಷ್ಕೃತ|
ವನಧನಂಜಯ ಪರಮಪಾವನ |
ವಿನುತಜನಮಂದಾರ ತಿಳಿಯಾರಾತಿ ಗಿರಿಕುಲಿಶ ||
ಅನಘ ನೀನಾ ದೇವಸುರುಪದ|
ವನಜಸೇವೆಯ ಗೈಯೆನಿನ್ನಯ |
ಜನನಮರಣವಪರಿದು ಮುಕುತಿಯನೀವಕೇಳೆಂದ || ೨೭ ||

ಅಂಧಕಂಗಕ್ಷಿಗಳುಬಂದೊಲು |
ಪಂದೆಗತಿ ಧೃತಿಧುರದೊಳೊಗೆದೊಲು |
ಕುಂದಿದೈನ್ಯದೊಳಿರ್ಪ ದಾರಿದ್ರ್ಯಂಗೆನಂದಿರದಿ ||
ಬಂದುಕಡವರ ಮುಂದೆಬೀಳ್ದೊಲು |
ಮುಂದೆಗತಿಪಿಂತೆಂಬಬಂಜೆಗೆ |
ಕಂದನುದಿಸಿದ ತೆರದೊಳಾದುದು ಹನುಮನಂತರದಿ || ೨೮ ||

ಸಂತಸದಿ ಸುರಮುನಿಯ ಪದವನ |
ಚಾಂತರಕೆ ಮಣಿಯುತ್ತಘನಕರು |
ಶಾಂತರಂಗನೆ ಯನ್ನೊಳತಿಮುನುತೆಯುಲಿದಯುಗೈದು ||
ಕಂತುವಮಾಯಾ ಮೋಹಪಾಶಗ |
ಳಂತರಿವಸದ್ಗುರುವತೋರಿದೆ |
ಎಂತುನಿನ್ನಯಕೃಪೆಯ ಬಣ್ಣಿಸಲಯ್ಯ ನಾನೆಂದು || ೨೯ ||

ತವಕದಿಂದನುಮತಿಯ ಪಡೆಯುತ |
ಜವದೆ ಬಂದನುಪಮದೆ ಶೋಭಿಸ್ಸ|
ಭವವಿದಾರಣ ತುಂಗಭದ್ರೆಯೊಳತುಲಹರುಷದಲಿ ||
ಭವನನೆನೆಯುತ ಮಿಂದುಬಂದಾ |
ಭುವನದಕ್ಷಿಣ ಕಾಶಿಕ್ಷೇತ್ರಾ |
ಧವನ ಪಂಪಾವಿರೂಪಾಕ್ಷೇಶ್ವರನಪೂಜಿಸುತ || ೩೦ ||

ತೆರಳಿಉದ್ದನ ವೀರಭದ್ರೇ |
ಶ್ವರನಿಗೊಂದಿಸಿ ನುತಿಸಿಪೂಜಿಸಿ |
ಭರದಿಬಂದಾ ಹೇಮಕೂಟಾಚಲದಕಂದರದಿ ||
ತ್ವರದಿಸಿದ್ಧಾಸನದಿ ಕುಳಿತತಿ |
ಪರಮಪಾವನ ನಾಮನೆನೆಯುತ |
ಲಿರಲುಕತಿಪಯ ದಿನಗಳುರುಳಲು ಮಾರುತಿಯುಘ್ಪಡದಿ || ೩೧ ||

ನಿಲಿಸಿದನು ಹೃದಯಾಂತರಾಳದಿ |
ಲಲಿತವೀರೇಶ್ವರನ ಮೂರ್ತಿಯ |
ಚಲಿಸದಂದದೆ ದೃಗುಮನೋವಾಯುಗಳ ನೊಂದೆನಿಸಿ ||
ಸಲಿಲವಾಹಾರಗಳ ವರ್ಜಿಸಿ |
ಬಲಿಸಿಧ್ಯಾನವ ಮರೆದುಬಾಹ್ಯವ |
ಜ್ವಲನನೇತಾನಾಗಿ ತೋರಿದನನಲಸಖತನಯ || ೩೨ ||

ಮೆಚ್ಚುತಲಿ ಮಾರುತಿಯತಪಕತಿ |
ಚಚ್ಚರದಿ ಮೈದೋರಿಭಾಪುರಿ |
ಕೆಚ್ಚೆದೆಯಕಡುಗಲಿಯೆ ನೀನೇಕಿಂತುತಪಿಸುತಿಹೆ ||
ಅಚ್ಚರಿಯು ಪೆಳ್ನಿನ್ನಮನದಸ |
ದಿಚ್ಛೆಯೇನಿಹುದೆನುತ ಕೇಳಿದ |
ನಚ್ಚಿಮೂರನ ತನಯನಾ ಪವಮಾನತನಯನನು || ೩೩ ||

ಇಷ್ಟಬಯಕೆಯದೇನಿಹುದು ನಿನ |
ಗಷ್ಟಸಿದ್ಧಿಯೊ ನಿಧಿಗಳೋ ನವ |
ಅಷ್ಟದಿಕ್ಪಾಲಕರ ಪತ್ತನವಾಸದತಿಸುಖವೊ ||
ಸ್ರಷ್ಟನಿರುತಿಹ ಸತ್ಯಲೋಕವೊ |
ವಿಷ್ಣುರಶ್ರವ ಭುವನವಾಸವೊ |
ಅಷ್ಟಮೂರ್ತಿಯ ಶ್ರೇಷ್ಠವಹ ಕೈಲಾಸದತಿಸುಖವೊ || ೩೪ ||

ಬೆಚ್ಚದಲೆ ಬೆದರದಲೆಪೇಳ್ವಿ ।
ನ್ನಿಚ್ಛೆಯೇನಿಹುದದನೆಪಾಲಿಪೆ ।
ಸಚ್ಚರಿತ ನೀಬಿಡುಬಿಡೀಘನಘೋರ ತಪವೆನಲು ॥
ಸಚ್ಚಿದಾನಂದಮುಲರೂಪನೆ ।
ಮೆಚ್ಚಿದೆಯು ನಿನೇನುತ ಹರುಷದಿ ।
ಕೆಚ್ಚೆದೆಯು ಕಡುವೀರರಗ್ರಣಿ ನಿಳ್ದುಕಂಪಿಸುತ ॥ ೩೫ ॥

ವೀರಭದ್ರೇಶ್ವರನ ವರಪದ।
ವಾರಿಜಕೆ ಸಾಷ್ಟಾಂಗವೆಸಗುತ ।
ಭೂರಿಭಕುತಿಯುಲಿಂದ ಕರಗಳನುಗಿದು ದೈನ್ಯದಲಿ ॥
ಮಾರಹರನವತಾರ ಸಂಗರ ।
ಶೂರ ನಪ್ರತಿವೀರ ರಿಪುಸಂ ।
ಹಾರ ಭಕ್ತೋದ್ಧಾರ ಕರುಣಾಪಾರ ರಕ್ಷಿಪುದೈ ॥ ೩೬ ॥

ಒಲ್ಲೆನಾ ಗುರುದೇವ ಸಂಪದ ।
ವೊಲ್ಲೆನಾಸಗ್ಗಾದಿ ಸುಖಗಳ ।
ನೊಲ್ಲೆನಾ ಹರಿಯಜರಲೋಕನಿವಾಸವನು ನಾನು ॥
ಬಲ್ಲಿದನೆ ಪಾಲಿಪುದುಭವಭಯ ।
ವಿಲ್ಲ ದಂದದಿಗೈದು ಹರಪದ ।
ದಲ್ಲಿನೆಲಸುವ ಘನತರದನಿಶ್ರೇಯಸವ ನೀನು ॥ ೩೭ ॥

ಎಂದುಬೇಡುತ ನಿಂದಮಾರುತಿ ।
ಗೆಂದನಾ ವೀರೇಶಕೇಳ್ವೈ ।
ಕಂದನಿತ್ಯಾನಂದವೇ ತಾಮುಕ್ತಿಯೆಂದು ತಿಳಿ ॥
ಚಂದದಿಂತೋರುತ್ತಲಭ್ರದೊ ।
ಳೆಂದು ಬಯಲಹಸುರಪಚಾಪದೊ ।
ಳಿಂದುಧರನೊಳಗೈಕ್ಯವಪ್ಪುದೆ ಮೋಕ್ಷನೀನರಿಯೈ ॥ ೩೮ ॥

ನೀರೆ ತಾ ಕರಿಗೊಂಡು ಭುವನದಿ ।
ವಾರಿಶಿಲೆಯಂದದಲಿ ತೋರುತ ।
ನೀರಿನೊಳಿತಾಕರಗಿ ಬೆರೆದೊಲು ಹೇಮದಾಭರಣ ॥
ತೋರಿ ನಾನಾರೂಪದಂತ್ಯದಿ ।
ಸೇರುವೊಲು ಕನಕದಲಿ ಆತ್ಮನು ।
ಸಾರಿ ಶಿವನೊಳು ಬೆರೆಯುವುದೆ ತಾ ಮುಕ್ತಿ ಕೇಳೆಂದ ॥೬೯॥

ಅದನೆ ವೇದಾಂತೆಂಬ ಬ್ರಹ್ಮಂ ।
ದದನೆ ವ್ಯಾಕರಣೆಂಬ ಶಬ್ದಂ ।
ದದನೆ ಸಾಂಖ್ಯನು ಪುರುಷ ಪರಮಾಣೆಂದು ತಾರ್ಕಿಕನು ॥
ಅದುವೆ ತಾ ಮಹಲಿಂಗ ತಿಳಿಯೈ ।
ಅದುವೇ ಮೂಲವು ಸೃಷ್ಟಿ ಸ್ಥಿತಿ ಲಯ ।
ಕದರೊಳಗೆ ಬೆರೆಯುವುದೆ ಮುಕ್ತಿಯು ಮಗನೆ ಕೇಳೆನಲು ॥ ೭೦ ॥

ಅದನಪೇಕ್ಷಿಸಿ ತವಪದಂಗಳ ।
ಪದಪಿನಿಂ ಸೇವಿಸಲು ಬಂದಿಹೆ ।
ಮುದದಿ ನಿಮ್ಮಯ ಶಿಷ್ಯಕೋಟಿಯೊಳೆನ್ನ ಸೇರಿಸುತ ॥
ಪದುಳದಿಂ ಪಾಲಿಪುದು ನೀದಯ ।
ನಿಧಿಯೆಯೆನ್ನುತ ಪಾದಕೆರಗಲು ।
ಸದಯನಾಗುತ ವರದಹಸ್ತವನಿರಿಸಿ ಮಸ್ತಕದಿ ॥ ೭೧ ॥

ಶಿಷ್ಯ ಕೇಳಾ ಮಹಾಲಿಂಗವೆ ।
ಸೃಷ್ಟಿಯೊಳು ಮೂವಿಧದಿ ಶೋಭಿಪು ।
ದಿಷ್ಟವಾ ಸ್ಥಾವರವು ಪಾರ್ಥಿವ ವೆಂದು ಪೂಜಿಪರ ॥
ಕಷ್ಟಗಳ ಪರಿಹರಿಸುತವರಾ ।
ಭೀಷ್ಟಗಳ ಪಾಲಿಸುತಲಿದರೊಳ ।
ಗಿಷ್ಟಲಿಂಗವೆ ಶ್ರೇಷ್ಠ ಫಲದಾಯಕವು ತಿಳಿ ನೀನು ॥ ೭೨ ॥

ಆಮಹಾಲಿಂಗವದು ತಾ ನಿ ।
ಷ್ಕಾಮದಿಂದಲಿ ಪೂಜೆಗೈವನು ।
ಸೋಮಧರನೋಲಗದಿ ಶೋಭಿಪನತುಲನೆಂದೆನಿಸಿ ॥
ಆಮಹಾತ್ಮನಿಗೆಣೆಯುದಾರಿನ ।
ಲಾಮರುದ್ಭವನಮಿತದೈನ್ಯದಿ ।
ಸ್ವಾಮಿಪಾಲಿಪುದಿಷ್ಟಲಿಂಗವನೆಂದುಪದಕೆರಗೆ ॥ ೩೩ ॥

ಕೇಳುಪವನಜ ನಿನ್ನಬಯಕೆಯು ।
ಪೇಳಲೇನದು ವೀರಶೈವದ ।
ಲೋಲವರ್ಗವು ಶುಲಭವಲ್ಲವು ಕಷ್ಟವತಿಶಯವು ।
ಭಾಳಕೋಪದಪುಲಿಯರದನವು ।
ಕಾಳಸರ್ಪನತಲೆಯ ಮಾಣಿಕ ।
ಕೀಳಲಪ್ರತಿ ವೀರತನವೆಂತಂತೆತಿಳಿಯನೆಲು ॥ ೩೪ ॥

ಎನ್ನಸದ್ಗುರುದೇವ ಪಾಲಿಸು ।
ನಿನ್ನ ಪದಪದ್ಮಗಳನಂಬಿದೆ
ನಿನ್ನನೀನರುಹಿದೊಲು ನಾನಾಚರಿಪೆದಂಪಿಂಪ ॥
ಚೆನ್ನೆಸೆವವರವೀರಶೈವವ ।
ತೋನ್ನತದ ತತ್ವವನೆಬೋಧಿಸು ।
ತಿನ್ನು ಘನವೆನಿಪಿಷ್ಟಲಿಂಗವ ನಿತ್ತುಪೋರೆಯೆನುತ ॥ ೩೫ ॥

ಚರಣಗಳಪಿಡಿದತುಲಭಕ್ತಿಯೊ ।
ಳಿರಗೆ ಪಿಡಿದೆತ್ತುತಲಿ ಶಿರವನು ।
ಭರದೆ ವೈದಡವುತ್ತಲಭಯವನಿತ್ತುಹರುಷದಲಿ ॥
ತ್ವರದಿ ದೀಕ್ಷೆಯಗೈದುಲಿಂಗವ ।
ಕರುಣಿಸುತ ನೀನುತ್ತಮಾಂಗದಿ ।
ಧರಿಪು ದರೆನಿಮಿಷಗಲದಲೆ ಪೂಜಿಪುದು ನಿರುತದಲಿ ॥ ೩೬ ॥

ಲಿಂಗಕರ್ಪಿಸದಾವವಸ್ತುವ ।
ನಂಗಕೀಯಲುಬಾರದೈ ಈ ॥
ಲಿಂಗವಂಗದಿ ತೊಲಗೆಭಂಗವದಾಗೆಮರಣಪುದು ॥
ಲಿಂಗವೇ ಗುರುಲಿಂಗಜಂಗಮು ।
ಲಿಂಗವೇ ಪರಶಿವನುತಿಳಿಯೈ ।
ಲಿಂಗದೊಳಿನೀ ಕಣ್ಮನಂಗಳನಿರಿಸಿಪೂಜಿಪುದು ॥ ೪೭ ॥

ಎನುತಲಿಂಗಸಕೀಲವೆಲ್ಲವ ।
ನನುಗೊಳಿಸಿ ಹನುಮಂತ ಕೇಳ್ಕೆ ।
ವಿನುತ ಪಂಚಾಚಾರ ನಷ್ಟಾವರಣ ಷಟ್ಸ್ಥಲದ ॥
ಘನವರಿಯುತಾಚರಿಪುದೆಂದೆನ ।
ಲನಘಬೋಧಿಪುದವುಗಳತಿಶಯ ।
ವೆನಲುಪೇಳಿದ ನತುಲಹರುಷದೊಳಾಗವೀರೇಶ ॥ ೪೮ ॥

ಪವನಿ ಕೇಳಾಚಾರಪಂಚಕ ।
ವವನುಬಿಡದಾಚರಿಸಬೇಕೈ ।
ಕುವರ ಲಿಂಗಾಚಾರವಾದಿಯದದನು ತಿಳಿನೀನು ॥
ಶಿವನೆಲಿಂಗವು ಜೀವವಂಗವು ।
ಶಿವಗೆ ಲಿಂಗಕೇಭೇದವಿಲ್ಲವು ।
ಶಿವನೊಳಗೆತಾನೈಕ್ಯನಾಗುವ ಪಥವಸಾಧಿಪುದು ॥ ೪೯ ॥

ಶರಣನೇಸತಿ ಲಿಂಗಪತಿಯುಂ ।
ದೊರೆವಶೃತಿವಚನದೊಲು ಸಂತತ ।
ಪರೆಮುಖಕುತಿಯುಲಿಂಡ ತನುಮನವೇಕಗೈವುತ್ತ ॥
ಪರಮಪಾವನ ಲಿಂಗದೇವನ ।
ಸ್ಮರಣೆಯಲ್ಲದಲನ್ಯದೈವವ ।
ಸ್ಮರಿಸಬಿಡುದೇಕೇಳು ಲಿಂಗಾಚಾರವಿದುಹನುಮ ॥ ೫೦ ॥

ಸತತಸತ್ಪಥದೊಳಗೆ ನಡೆಯುತ ।
ಕೃತಕವಿಲ್ಲದಕಾರ್ಯಗೈವುತ ।
ಲತಿಥಿಯಾಗಿಹ ಚರರನೇಗುರು ಶಿವನೆಂದುಭಾವಿಸುತ ॥
ಕ್ಷಿತಿಯೊಳನ್ಯರವ್ಯಥೆಗೆಮರುಗುತ ।
ಹಿತವಬಯಸುತ ಸರ್ವಜನರಿಗೆ ।
ಮತಿಯುನನ್ಯಾಯದೊಳು ಬೆರಸದೆಮಿಥ್ಯವಾಡದಲೆ ॥ ೫೧ ॥

ದೀನಹೀನರಬಯಕೆ ಸಲಿಸುತ ।
ದಾನದಾಸೋಹಗಳಗೈವುತ ।
ಮಾನಮನ್ನಣೆಯರಿದುಗುರು ಹಿರಿಯರನುಸೇವಿಸುತ ॥
ಪ್ರಾಣಿಕೋಟಿಗಳನ್ನುತನ್ನಯ ।
ಪ್ರಾಣದೊಲು ಭಾವಿಸುತಲಿರ್ಪುದೆ ।
ಜಾಣತಿಳಿಯೈ ಮನದಿಸಂತತ ಸದಾಚಾರೆಂದು ॥ ೫೨ ॥

ಕಾಯಕವನೆನೋಡದಲೆ ಭಕ್ತನಿ ।
ಕಾಯವೆಲ್ಲವ ನೊಂದೆಯೆನ್ನುತ ।
ಲಾಯತದೊಳರಸದಲೆ ಸಮಭಾವವನುತಳೆಯುತ್ತ ॥
ಕಾಯಜಾಂತಕ ರೂಪರಿವರೆಂ।
ದಾ ಯುವತಿಪುರುಷರೊಳುಭೇದವ ।
ನಾಯದಲೆಯಾಚರಿಸುತಿರ್ಪುದೆ ಶಿವಾಚಾರವಿದು ॥ ೫೩ ॥

ಶಿವನಭಕ್ತರನಿಂದೆಯನುಪರ ।
ಶಿವನದೂಷಣೆಗಳನುಕೇಳದ ।
ಲವಿರತಂ ತಾ ಕೇಳೆನೆಂಬಪ್ರತಿಜ್ಞೆಯನುಗೈದು ॥
ಶಿವನಮತವುದ್ಧಾರಗೈಯಲು ।
ಜವದೆ ಕಂಕಣಬದ್ಧನಾಗುತ ।
ಲವನಿಯೊಳುಘನತೆಯೊಳು ನಡೆವುದೆಗಣಾಚಾರ ತಿಳಿ ॥ ೫೪ ॥

ಕಿರಿಯುರೆನಗಿಂದಿಲ್ಲ ಧರೆಯಲಿ ।
ಹರನಭಕ್ತರ ಮೇಲೆತೋರುವ।
ಹಿರಿಯುರಿಲ್ಲವು ಮೂರುಲೋಕದೊಳೆಂಬಭಾವನೆಯು ॥
ಕರಣಮೂರರೊಳಿರಿಸಿ ಸೇವಿಸು ।
ತಿರುವುದೇ ಘನತರವೆಶೋಭಿಸ ।
ಪರಮಭೃತ್ಯಾಚಾರವಿದು ಕೇಳಿದಿಯುಪವಮಾನಿ ॥ ೫೫ ॥

ವೀರರಗ್ರಣಿಕೇಳುಸಮರದಿ ।
ವೀರತನತೋರುವೊಲು ಪಂಚಾ ।
ಚಾರದಲಿತಾಪ್ರಾಣತೃಣವೆಂದರಿದುಪಂಥದಲಿ ॥
ಮಾರಹರನನುಪಮದಮತದು ।
ದ್ಧಾರ ಕಾರ್ಯದೊಳಡಿಸಿದೆಡರನು ।
ಶೂರತನದಿಂ ತರಿದುಪಾಲಿಪುದೆನಲು ಹರುಷದಲಿ ॥ ೫೬ ॥

ತಂದೆಷಟ್ಸ್ಥಲಗಳನು ವಿವರಿಪು ।
ದೆಂದೆನಲು ಕೇಳ್ತನಯುಸಕ್ರಮ ।
ದಿಂದಸ್ನಾನವಗೈದು ಪೂಜಾಲಯದೊಳಾಸನದಿ ॥
ಬಂದುಕುಳಿತತಿವಿಮಲ ಮಾನಸ ।
ದಿಂದ ಭಸ್ಮಾಕ್ಷಗಳಧರಿಯಿಸು ।
ವಂದು ಭಕ್ತಸ್ಥಲವದಾದುದು ಕೇಳು ಹನುಮಂತ ॥ ೫೭ ॥

ವರದ ಗುರುವರನೊರೆದ ಮಂತ್ರವ ।
ಭರದಿನ್ಯಾಸತ್ರಯುವ ಗೈವುತ ।
ಪರಮಭಕುತಿಯುಲಿಂದ ಶಿರವಸ್ತ್ರದಲಿ ಮುಸುಕಿಟ್ಟು ॥
ಪರಶ್ರುತಿಗೆಬೀಳದೊಲು ತಾನು ।
ಚ್ಚರಿಸುವಲ್ಲಿಯೆತಿಳಿಯೆ ಮಾಹೇ ।
ಶ್ವರನ ಸ್ಥಲವದು ಸಂಡುದೈಕೇಳಂಜನಾತನಯು ॥ ೫೮ ॥

ಕರಡಿಗೆಯೊಳಿಹ ಲಿಂಗಮೂರ್ತಿಯ ।
ಹರುಷದಿಂದೆಡ ಹಸ್ತದೊಳು ತಂ ।
ದಿರಿಸುವುದೆ ವರಸುಪ್ರಸಾದಿಸ್ಥಲವು ಕೇಳಿನ್ನು ॥
ಭರದಿ ಷೋಡಶದೋಪಚಾರದೊ ।
ಳರರೆ ಘನರಾಜೋಪಚಾರದೊ ।
ಳರಿದುಗೈವುದೆ ಪ್ರಾಣಲಿಂಗಿಯುಸ್ಥಲವು ನೀ ತಿಳಿಯೈ ॥ ೫೯ ॥

ಇನ್ನುಕೇಳ್ ಭೋಜನಪದಾರ್ಥಗ ।
ಳನ್ನುಮನುಸಂಸ್ಕರದಿ ಶುದ್ಧತೆ ।
ಯನ್ನು ಗೊಳಿಸಿಪ್ರಸಾದವನು ತಾಗೈದು ಹರುಷದಲಿ ॥
ಚೆನ್ನ ಶ್ರೀಗುರುಶಿವನ ಪಾದ ।
ಗಳನ್ನು ನೆನೆಯುತ ಶೇವಿಸುವುದೇ ।
ಸನ್ನುತಾಮಳ ಶರಣಸ್ಥಲವಿದು ಹನುಮ ಕೇಳಿನ್ನು ॥ ೬೦ ॥

ಅಂಗಲಿಂಗವ ನೊಂದೆಗೈವುತ ।
ಲಿಂಗವೇತಾನಾಗಿ ತೋರುತ ।
ಮಂಗಳಾತ್ಮಕ ಶಿವನಲೀಲೆಗಳನ್ನು ನೆನೆಯುತ್ತ ॥
ಭಂಗವಿಲ್ಲದ ಶರಧಿಯೊಲು ತಾ ।
ಕಂಗೊಳಿಸುವುದೆ ಐಕ್ಯಸ್ಥಲವೆನೆ ।
ತುಂಗವಿಕ್ರಮ ವಿವರಿಸಷ್ಟಾವರಣಗಳ ನೆನಲು ॥ ೬೧ ॥

ಜಾತಕೇಳ್ ಗುರುಲಿಂಗಜಂಗಮ ।
ಭೂತಿರುದ್ರಾಕ್ಷೆಗಳು ಮಂತ್ರವು ।
ಪೂತಪಾದೋದಕ ಪ್ರಸಾದಗಳೆಂಟು ತಿಳಿಯಲ್ಕೆ ॥
ಭೂತನಾಥನಪ್ರೀತವತಿವಿ ।
ಖ್ಯಾತ ವಷ್ಟಾವರಣಗಳು ಸಂ
ಪ್ರೀತಿಯಿಂದಿವ ಪೂಜಿಸುತ್ತಿಹುದನುದಿನಗಲದಲೆ ॥ ೬೨ ॥

ಗುರುವೆಶಿವನಾ ಶಿವನೆಗುರುವೆಂ ।
ದರಿದು ಪೂಜಿಪ್ಪುದಮನಿಮಿತ್ತದಿ ।
ವೊರೆವುದೈಶೃತಿ ಧರೆಗೆ ನಗುರೋರಧಿಕವೆಂದೆನುತ ॥
ತರುಳಭವಬಂಧನವಕಳೆಯಲು ।
ಗುರುವಚನವೊಂದಲ್ಲ ದಿನ್ನೀ ।
ಧರೆಯೊಳಗೆ ಬೇರೊಂಪದಿಲ್ಲೈಕೇಳು ಪವಮಾನಿ ॥ ೬೩ ॥

ಗುರುವಿ ನುನ್ನತಬಣ್ಣಿಸಲು ತಾ ।
ಮರಸಜಾದ್ಯರಿಗಗೋಚರ ವರ ।
ಗುರುವನರನೆಂದೆಂಬ ಪಾಪಿಗೆ ತಪ್ಪದೈನಿರಯು ॥
ಗುರುವೆ ಇಹದತಿ ಸೌಖ್ಯದಾಯಕ ।
ಗುರುವೆ ಪರತರಮುಕ್ತಿ ದಾಯಕ ।
ಗುರುವಿನಂಘ್ರಿಯು ನಂಬಿದವಗೆಣೆಯುಂಟೆ ಮೂಜಗದಿ ॥ ೬೪ ॥

ಕೇಳು ನೀನನಿಲಭವ ನಿನ್ನಗೆ ।
ಪೇಳಲಳವೇ ಲಿಂಗಮಹಿಮೆಯು ।
ವ್ಯಾಳಪತಿಗಸದಳವು ಸಾಸಿರಜಿಹ್ವೆಯಿಂ ಪೊಗಳೆ ॥
ವ್ಯಾಳಶಯನ ಪಿತಾಮಹಾದಿಗ ।
ಳಾಲಕುಮಿ ಸರಸತಿಯರೆಲ್ಲರು ।
ತಾಳಿಮಸ್ತಕದಲ್ಲಿ ಪೂಜಿಪರಗಲದನುದಿನದಿ ॥ ೬೫ ॥

ಜಲಧರೋದ್ಭವ ಗೌತಮಾದ್ಯರು ।
ನಳಕುಕುತ್ಸಪುರೂರವಾದಿಗ ।
ಳೊಲವಿನಿಂದರ್ಚಿಪರು ಇಷ್ಟಪ್ರಾಣಭಾವಗಳ ॥
ನೆಲೆಯರಿದು ಪೂಜಿಸುವ ಮನುಜಗೆ ।
ಫಲಿಸುವುದು ತಾನೆಳಸಿದುದು ಇಳೆ ।
ಯೊಳಗೆ ಸಂಪದವಖಿಳ ಭೋಗಿಸಿ ಪಡೆವ ಕೈವಲ್ಯ ॥ ೬೬ ॥

ಲಿಂಗವಿದು ತಾನತ್ಯತಿಷ್ಠದ್ದ ।
ಶಾಂಗುಲವು ಎಂದೆನಿಸಿ ಮೆರೆವುದು ।
ಭಂಗಬಟ್ಟರು ಹರಿವಿಧಿಗಳಾದ್ಯಂತ ವರಿಯದಲೆ ॥
ಲಿಂಗಮೂರಾರೆನಿಸುತಲಿ ನವ ।
ಲಿಂಗವಾಗಿಹ ತತ್ವತಿಳಿದವ ।
ನಿಂಗೆಭವಭಯವಿಲ್ಲವವ ಪ್ರಮಥಾಧಿಪನು ತಿಳಿಯೈ ॥ ೬೭ ॥

ಇನ್ನುಕೇಳೈ ಜಂಗಮದ ಘನ ।
ವನ್ನು ಬಣ್ಣಿಸಲೊಶವೆಸುರಪತಿ ।
ಪನ್ನಗಾರಿವರೂಥ ಲೋಕೇಶಾದಿ ದಿವಿಜತತಿ ॥
ಸನ್ನುತಿಸಿ ಪೂಜಿಪರು ಜಂಗಮ ।
ದುನ್ನತವತಾವರಿದು ಭಕ್ತಿಯೊ ।
ಳಿನ್ನು ಮಾನವದನುಜರರ್ಚಿಪ ರತುಲ ಹರುಷದಲಿ ॥ ೬೮ ॥

ಲಿಂಗವದನವೆ ಜಂಗಮವುತಿಳಿ ।
ಲಿಂಗಪೂಜಿಸಿ ಜರಿಯೆವರಗುರು ।
ಜಂಗಮರ ಭವಭಯವುತಪ್ಪದು ಮಗನೆ ತಿಳಿದಿವನು ॥
ಜಂಗಮವೆ ಶಿವನೆಂದು ತಿಳಿವುಧು ।
ಜಂಗಮವೆ ಜಗದಾದಿ ಮೂರುತಿ ।
ಜಂಗಮವೆ ಗುರುಲಿಂಗರೂಪನು ಕೇಳುಪವಮಾನಿ ॥ ೬೯ ॥

ಜನನ ಮರಣವಿದೂರ ನಿತ್ಯನು ।
ವಿನುತಮುನಿ ಜನಸೇವ್ಯ ಪೂಜಿತ ।
ನನುಪಮಾನಂದಾತ್ಮ ನಿರ್ಗುಣ ಸಗುಣಪರಿಪೂರ್ಣ ॥
ಅನಘನದ್ವಯ ನಮಲರೂಪನು ।
ವಿನುತತ್ರೈಜಗದಾದಿ ದೇವನು ।
ಘನಕೆ ಘನವಿಹುದನಿಲಭವಕೇಳ್ ಜಂಗಮನ. ಮಹಿಮೆ ॥ ೭೦ ॥

ಆಲಿಸಿನ್ನು ವಿಭೂತಿ ಮಹಿಮೆಯ ।
ಫಾಲನಯನನ ಪಂಚವದನದಿ ।
ಶೀಲ ನಂದಾ ಭದ್ರೆ ಸುರಭಿ ಸುಶೀಲ ಸುಮನಗಳು ॥
ತಾಳಿಜನ್ಮವ ಧರಣಿಯಲಿ ಜನ ।
ಜಾಲಪಾಲನೆಗಾಗಿ ಭಸ್ಮವ ।
ಪಾಲಿಸಿದವ್ವೆ ಪಂಚಕೃತ್ಯಕೆ ಪಂಚವಿಧವಾಗಿ ॥ ೨೧ ॥

ಭೂತಿಭಸಿತವು ಭಸ್ಮಕ್ಷಾರವು ।
ಖ್ಯಾತರಕ್ಷೆಗಳೆಂಬ ನಾಮದಿ ।
ನಿತ್ಯವಾನೈಮಿತ್ಯ ಕಾಮ್ಯಪ್ರಾಯಶ್ಚಿತ್ತಗಳು ॥
ಮತ್ತೆಮುಕ್ತಿಯದೆನಿಪ ಕೃತ್ಯದೊ ।
ಳೋತುಧರಿಸಲು ಸಿದ್ಧಿದಾಯಕ ।
ತಾ ತಿಳಿದುಕಲ್ಪಾದಿಭೇದಗಳನ್ನು ಸಕ್ರಮದಿ ॥ ೨೨ ॥

ಧರಿಸಬೇಕ್ಕೆ ಫಾಲದಲಿ ತಾ ।
ಬೆರಳಮಧ್ಯದ ಮೂರರಲಿ ವಿ ।
ಸ್ತರವದಾರಂಗುಲವು ಮಿಗಿಲೆನೆಕರ್ಣ ಪರಿಯಂತ ॥
ಧರಿಸಬಾರದು ಬಿದಿಗಿಚಂದ್ರನ ।
ತೆರದಿ ಧರಿಸಲು ಲಯವುತಿಳಿಯೈ ।
ಧರಿಸಬಾರದು ನೊಸಲಮಧ್ಯದಿ ತಾರೆಯಂದದಲಿ ॥ ೨೩ ॥

ಸರ್ವಸಂಪದ ಪ್ರಾಪ್ತಿತಿಳಿಯೈ ।
ಸರ್ವದೋಷ ವಿನಾಶವರಿಯೈ ।
ಸರ್ವಭೂತ ಪ್ರೇತಪೈಶಾಚಾದಿ ಭಯಹರವು ॥
ಸರ್ವವಿಧದಾಪನ್ನಿವಾರಣ ।
ಸರ್ವಜಯ ಸುಶ್ರೇಯಶಾಂತಿಯು ।
ಸರ್ವದೇವಾಸುರರು ಮುನಿಗಳು ಧರಿಪರನವರತ ॥ ೨೪ ॥

ಪಲವುಮಾತೇನನಿಲಭವಕು ।
ಯಿಳೆಯ ಸಂಪದವೆಲ್ಲ ಭೋಗಿಸಿ ।
ಲಲಿತಮೆನೆ ಕೈವಲ್ಯಪದವಿಯ ಪಡೆವರಂತ್ಯದಲಿ ॥
ತಿಳಿದೆಯೊಯಿದು ಭಸ್ಮಮಹಿಮೆಯು ।
ತಿಳಿವುದೈರುದ್ರಾಕ್ಷಿ ಘನತೆಯ ।
ಪಳೆಯುನುಡಿಪೊಡೆಯುವನಿ ಗಳವಲ್ಲೊರೆಯುಲಾ ಮಹಿಮೆ ॥ ೭೫ ॥

ರುದ್ರಾಕ್ಷೋದ್ಭವವ ಧರಿಸಲು ।
ಛಿದ್ರವಹುದೈ ಭವವುತನ್ನ ದ ।
ರಿದ್ರ ಪರಿಹರಭಯನಿವಾರಣ ವಿಷ್ಟಫಲಪ್ರಾಪ್ತಿ ॥
ಕ್ಷುದ್ರವಹ ಭೇತಾಳಭೂತೋ ।
ಪದ್ರವವು ಪರಿಹರವು ನಿರುತ ಸ ।
ಮುದ್ರಭವೆ ತಾ ನಗಲದಿರುತಿಹಳಾತನಾಲಯದಿ ॥ ೭೬ ॥

ರುದ್ರನೇತಾನೆನಿಸಿ ಮೆರೆಯುವ ।
ರುದ್ರನೊಳಗವಗಿಲ್ಲ ಭೇದವು ।
ಭದ್ರಕೇಳೈದನುಜರಮರರು ಮನುಮುನೀಶ್ವರರು ॥
ಛಿದ್ರವಿಲ್ಲದ ಕಾಂತಿಗುಂದದ ।
ಭದ್ರಕರವಾಮಲಕಗಾತ್ರದ ।
ರುದ್ರಾಕ್ಷೋದ್ಭವವ ಧರಿಪರುಸತತವಗಲದಲೆ ॥ ೭೭ ॥

ಒಂದರಿಂ ಪದಿನಾಲ್ಕು ವದನಗ ।
ಳಿಂದಶೋಭಿಸುತಿಹವು ತಿಳಿಯಿದ ।
ರಿಂದವರಿದರ್ಚಿಸುತ ಸಕ್ರಮದಿಂದ ಧರಿಪಂಗೆ ॥
ಬಂದಕಂಟಕವೆಲ್ಲ ಪರಿಹರ ।
ನಿಂದಿಸುವರೊಂದಿಸುವ ರಂತ್ಯದಿ ।
ಗೊಂದೆವಳವಿಗೆಯುಭವ ನೋಲಗದೊಳಗೆ ಸುಖದಿಹನು ॥ ೭೮ ॥

ಅನಿಲಭವಕೇಳಿನ್ನು ಮಂತ್ರದ ।
ಘನವಪೇಳಲ್ಕಳವೆ ತಿಳಿಯೈ ।
ವನಜಜಾಂಡದೊಳೇಳು ಕೋಟಿಗಳಿಹವು ಮಹಮಂತ್ರ ॥
ಅನಿತಕೆಲ್ಲಕೆ ಮೂಲಮಂತ್ರವ ।
ದನಘಪಂಚಾಕ್ಷರವು ತಿಳಿಯದ ।
ರನುವರಿದು ತಾನೊಮ್ಮೆಜಪಿಸಲು ಮುಕ್ತಿಘಟಿಸುವುದು ॥ ೭೯ ॥

ಬೇಡಿದಿಷ್ಟಾರ್ಥಗಳ ನೀವುದು ।
ಕಾಡುತಿಹರೋಗಗಳ ಕಳೆವುದು ।
ಕೇಡುಗೈಯುವ ಭೂತಭೇತಾಳಾದಿ ದುರ್ಭಯವ ॥
ನಾಡೆಪರಿಹರಗೈಯುತಿಹುದದ ।
ನಾಡಲತಿಶಯ ಬಲ್ಲಗುರುವಿನ ।
ಕೂಡೆತಿಳಿವುದು ಶಕ್ತಿಋಷಿಛಂದಾದಿಗಳ ವಿವರ ॥ ೮೦ ॥

ಮೂಲಪಂಚಾಕ್ಷರವು ಸೂಕ್ಷ್ಮವು ।
ಸ್ಥೂಲಪಂಚಾಕ್ಷರವು ಮಾಯೆಯು ।
ಮೇಲೆಸುಪ್ರಸಾದ ಪಂಚಾಕ್ಷರಗಳಿಂ ಬೈದು ॥
ಕೀಲಕಾದಿಗಳರಿದು ಸತತಸ ।
ಕಾಲದಲಿಜಪಿಸುವವ ನಂತ್ಯದಿ ।
ಶೂಲಿಯಾಲಯ ಸೇರಿಸುಖಿಸುವ ಶಿವನೆತಾನಾಗಿ ॥ ೮೧ ॥

ಆವಮಾನವ ನಾವವಿಧದಿಂ ।
ಪಾವಸಮಯದೊಳಾದರೆಯು ಈ ।
ಪಾವನಾತ್ಮಕ ಮಂತ್ರಪಠಣವ ತ್ರಿಕರಣದಿಂಗೈಯ್ಯೆ ॥
ದೇವದೇವನಲೋಕದೊಳು ರಾ ।
ಜೀವಭವ ಹರಿಗಳಿಗೆಮಿಗಿಲೆನಿ ।
ಪಾವಿಮಳ ಸಾಯುಜ್ಯಪದವನುಭವಿಪ ಕೇಳ್ಪವನಿ ॥ ೮೨ ॥

ಎಂದು ಮಂತ್ರಮಹತ್ವವರುಹುತ |
ಮುಂದೆಪಾದೋದಕದ ಮಹಿಮೆಯ |
ನಂದುವಿಸ್ತರಿಸಿದನು ದಶವಿಧದಿರುವ ಭೇದವನು ||
ಕಂಡ ಕೇಳಿದು ಗುರುಪದಾಂಬುಜ |
ದಿಂದದೊರೆವುದು ಧರೆಗೆ ಅಣುತಾ |
ನೊಂದುಸೂಸದ ತೆರದೆಕೊಳ್ವುದು ಬಹಳಭಕುತಿಯಲಿ || ೮೩ ||

ಭುವಿಗೆ ಲವ ಸೂಸಲ್ಕೆ ನೀ ಕೇ |
ಳವನು ನಿರಯದಿಬೀಳುವವನು ಶಶಿ |
ರವಿಗಳುಳ್ಳನ್ನದು ನಿಮಿತ್ತದಿ ಬಹಳಜಾಗರದಿ ||
ಕುವರಕೊಳ್ಳಲು ಭವವಿದಾರಣ |
ಕವಿವಮಾಯಾಪಾಶಪರಿಹರ |
ವವಗೆ ಸವನಿಪು ದನುಪಮದ ಕೈವಲ್ಯಪದವೆಂದ || ೮೪ ||

ವರಪ್ರಸಾದದ ಮಹಿಮೆಕೇಳಿ |
ನ್ನೊರೆಯಲಹಿಪತಿಗಳವದಲ್ಲದ |
ರಿರವು ಮೂತೆರ ಶುದ್ಧ ಸಿದ್ಧ ಪ್ರಸಿದ್ಧವೆಂದಿಹುದು ||
ತರುಳನದೆಪನ್ನೊಂದು ವಿಧವಿಹ |
ತೆರನ ಗುರುಮುಖದಿಂದಲರಿಯುತ |
ಪರಮಭಕುತಿಯಲಿಂದ ಕೊಂಬನೆ ಧನ್ಯತಿಳಿಯುವುದೈ || ೮೫ ||

ರೋಗಬಾಧೆಯದಿಲ್ಲವೈ ಭವ |
ರೋಗಪರಿಹರ ಧರಣಿತಲದಲಿ |
ಭೋಗಭಾಗ್ಯವದಮಿತ ಸತಿ ಪುತ್ರಾದಿಸಂಪದವು ||
ಊಗದಿಂದಾಪ್ತೇಷ್ಟರೆಲ್ಲ ಸ |
ರಾಗದಲಿಕೊಂಡಾಡೆ ಸರ್ವರು |
ಬಾಗುವರು ಕೀರ್ತಿಪರು ಪರಸುವರತುಲ ಹರುಷದಲಿ || ೮೬ ||

ಇದುವೆಯಷ್ಟಾವರಣ ಮಹಿಮೆಯ |
ದಿದನು ತಿಳಿದಾಚರಿಪ ಮಾನವ |
ಗೊದುಗುವುದು ಸುಖ ವಿಹದಿ ಮೋಕ್ಷವುಪರದೆಲಭಿಸುವುದು ||
ಇದನು ಬಿಡದಾಚರಿಸು ನೀನತಿ |
ಮುದದಿ ನಿರುತತಿಜವದಿ ನಿನ್ನಗೆ |
ಪದುಳದಿಂ ಲಭಿಸುವುದು ಮುಕ್ತಿಯದೆಂದುಮುತ್ತೆಂದ || ೮೭ ||

ಅಂಗವಷ್ಟಾವರಣಕೇಳ್ ಭವ |
ಭಂಗಪಂಚಾಚಾರ ಪ್ರಾಣವು |
ತುಂಗಷಟ್ಸ್ಥಲವಾತ್ಮವೆಂದರಿ ಯುತ್ತಲನುದಿನದಿ ||
ಮಂಗಳಾತ್ಮಕನೆನಿಸಿ ಶೋಭಿಪ |
ಲಿಂಗದೇವರ ಪೂಜಿಸುವುದು |
ತ್ತುರಂಗವೆನಿಸುವ ವೀರಶೈವ ಬುನಾದಿತಿಳಿತನಯ || ೮೮ ||

ಎನುತಲಿಂಗ ಸಕೀಲವೆಲ್ಲವ |
ನನುಗೊಳಿಸಿತೆರಳಲ್ಕೆ ಪವನಜ |
ನನುದಿನವು ಸ್ನಾನವನುಗೈವುತ ತುಂಗಭದ್ರೆಯಲಿ ||
ತನುವಚನಮನ ಮೇಕಗೈವುತ |
ಲನುಗೊಳಿಸಿ ಲಿಂಗದಲಿ ದಿಟ್ಟಿಯ |
ಘನತರದಸಿದ್ಧಾಸನದಿ ಕುಳಿತರ್ಚಿಸಿದತಟದಿ || ೮೯ ||

ಲಿಂಗದಲಿನುಡಿ ಲಿಂಗದಲಿಮನ |
ಲಿಂಗದಲಿದೃಗು ಲಿಂಗದಲಿಗತಿ |
ಲಿಂಗದಲಿಮೋಹಾದಿ ಸೌಖ್ಯಗಳನ್ನು ಪೊಂದುತಲಿ ||
ಲಿಂಗವಂಗವ ನೊಂದುಗೈದಾ |
ಲಿಂಗದೇಹಿಯ ರೋಮ ರೋಮದಿ |
ಲಿಂಗಕೋಟಿಗಳಾದವಷ್ಟೆ ಯುದ ಪೊಗಳಲಳವಲ್ಲ || ೯೦ ||

ಅತ್ತ ಗೌತಮಮುನಿಪ ನಾಶ್ರಯ ।
ದೊತ್ತಿಲಿಹಮುನಿಯೋರ್ವ ಲಿಂಗವ ।
ದೆತ್ತಪೋದುದೊ ಎನುತ ಕಳೆದಿರಲಸುವ ನೀಗಲ್ಕೆ ॥
ಚಿತ್ತಜಾಂತಕ ಮೆಚ್ಚಿ ಲಿಂಗವ ।
ನಿತ್ತುಪೋರೆಯಲು ಕೇಳಿಗೌತಮ ।
ಕೃತ್ತಿವಾಸನ ಪಾದ ದರುಶನಕ್ಕೈದಿ ಭಕುತಿಯಲಿ ॥ ೯೧ ॥

ವಂದಿಸುತ ಪದಪದ್ಮಗಳಿಗಾ ।
ನಂದದಿಂ ಕರಮುಗಿದು ದಯದಿಂ ।
ದಿಂದುಬಿಜಯಂಗೈದು ಲಿಂಗಾರ್ಚನೆಯ ಗೈದೆಮ್ಮ ॥
ಮಂದಿರವ ಪಾವನವಗೊಳಿಸುವು ।
ದೆಂದುಬಿನ್ನೈಸಲ್ಕೆ ಹರುಷದಿ ।
ಬಂದಶಿವಶಿವೆಯರಿಗೆ ವಂದಿಸಿನಿಂದಳಾಹಲ್ಯೆ ॥ ೯೨ ॥

ನಿಂದಹಲ್ಯೆಯು ಪರಸಿಹರಿಯಜ ।
ರಿಂದಲುಪವನಕ್ಕೈದಿ ಸರದಲಿ ।
ಮಿಂದುಲಿಂಗಾರ್ಚನೆಯಗೈದತಿ ಹರುಷದಿಂದಿರಲು ॥
ಬಂದುನಾರದಮುನಿಯು ಸಂತಸ ।
ದಿಂದಶಿವಮಹಿಮೆಗಳ ಪಾಡುತ ।
ನಿಂದಿರಲು ಸರದೆಗದು ನಾನಾವಿಧದರಾಗಲಿ ॥ ೯೩ ॥

ಬಂದನಾಸಮಯದಲಿ ಮಾರುತಿ ।
ನಂದನನು ಸಾಷ್ಟಾಂಗದಿಂದಲಿ ।
ವಂದಿಸುತ ಹಸ್ತದ್ವಯಂಗಳ ಮುಗಿದು ಭಕುತಿಯಲಿ ॥
ಕಂದುಗೊರಳ ಜಲಂಧರಾಂತಕ ।
ಇಂದಿರಾವರ ನೇತ್ರಪದ ಸುರ ।
ವೃಂದವಂದಿತ ಪಾರ್ವತೀಪತಿ ನಮೋನಮೋಯೆನುತ ॥ ೯೪ ॥

ಸರಿಗಮಂಗಳ ನುಡಿಸುತಲಿ ಸು ।
ಸ್ವರದಿರಾಗಂಗಳಲಿ ಪರಮೋ ।
ತ್ತರನ ಪಾಡಿದ ಮುಖ್ಯತಾರಾಮಂದರಂಗಳಲಿ ॥
ಪರಮಪರತರ ಮಹಿಮೆಗಳನಾ ।
ದರದಿ ಶಿವನತಿ ಹರುಷಿಸುತ್ತಿರ ।
ಲರರೆಪೊಗಳಲ್ಕಳವೆ ಗಾನದ ಇಂಪಿನಮಲತೆಯು ॥ ೯೫ ॥

ಸುರರುಮೈಮರೆದಾಲಿಸಿದರ ।
ಚ್ಚರಿಯುಗೊಂಡಪ್ಸರರು ನಿಂದರು ।
ಹರಿಯೆಪಾದಗಳುರಗನಿಚಯಕೆ ನಾಚೆಗಂಧರ್ವರ್ ॥
ಸುರಮುನಿಯುತುಂಬುರನ ನೋಡಲು ।
ಮರೆದುಗಾನವನಾಲಿಸಿದರಾ ।
ಹರನಕರ್ಣದೆ·ಪಾಡುವಶ್ವತಕಂಬಲರು ಜವದಿ ॥ ೯೬ ॥

ತೂಗಿದನುಶಿರ ಸರೀಸೃಪಧರ ।
ನಾಗಗೌತಮಬಂದು ಶಿರವನು ।
ಬಾಗಿಚಿತ್ತೈಸುವದು ಆಶ್ರಮಕೀಗಳೆಂದೆನಲು ॥
ರಾಗದಿಂ ನಂದಿಯನುಹತ್ತುತ ।
ಲಾಗ ಬಾ ಮಾರುತಿಯೆ ನಂದಿಯ ।
ನೀಗ ಹತ್ತುತಪಾಡು ನೀನೆಂದೆನಲು ಪವನಜನು ॥ ೯೭ ॥

ದೇವ ನಂದೀಶ್ವರನ ಹತ್ತಲ ।
ದಾವ ಯೋಗ್ಯತೆಯುನ್ನ ಗುಂಟೈ ।
ತಾವೆ ದಯದಿಂದೆನ್ನ ಭುಜದಲಿ ಹತ್ತಿ ಬಹುದೆನಲು ॥
ಕಾವ ಹರ ತಾಕುಳಿತು ಕೊಳ್ಳಲು ।
ಸಾವಕಾಶದಿ ಪಾಡುತಲಿ ಬರ ।
ಬೋವಿ ಗೌತಮನಾಶ್ರಮದೆ ತಾನಿಳಿದು ಸಂತಸದೆ ॥ ೯೮ ॥

ಲಿಂಗ ಪೂಜೆಯ ಗೈಯೆ ಗೌತಮ ।
ಸಾಂಗದಿಂ ಪದಪೂಜೆಗೈಯಲು ।
ಮಂಗಳಾತ್ಮಕ ಭುಂಜಿಸಿದ ಹರಿಯಜರಮೇಳದಲಿ ॥
ತುಂಗವಿಕ್ರಮ ಹನುಮನಾಕ್ಷಣ ।
ಅಂಗಭವಹರ ಪಾಲಿಸಪ್ಪಣೆ ।
ಲಿಂಗಪೂಜೆಗೆ ವೇಳೆಯಾದುದು ಪೋಪೆನೆಂದೆನಲು ॥ ೯೯ ॥

ಮಗನೆ ನಾಮೆಚ್ಚಿರಲು ನಿನ್ನಯ ।
ಬಗೆಗೆ ಪೂಜೆಯದೇತಕೆಸಗುವಿ ।
ಸೊಗಸಿನಲಿ ನೀನಿರ್ಪುದಿಲ್ಲಿಯೆ ಪಾಡುತೆಂದೆನಲು ।
ಮುಗಿದು ಕರಗಳ ಬಾಗಿಶಿರವನು ।
ನಗಜೆಯರಸನೆ ಗುರುವಿನಾಜ್ಞೆಗೆ ।
ಬಗೆಯೆಭಂಗವದೆನಿಪು ದನುಮತಿಯಿೂವುದೆಂದೆನಲು ॥ ೧೦೦ ॥

ಪೋಗು ನೀನೆಂದೆನದ ಮುನ್ನವೆ ।
ಪೋಗಿತವಕದಿ ತುಂಗಭದ್ರೆಯೊ ।
ಳಾಗ ಸ್ನಾನವಗೈದು ತಟದಲಿ ಕುಳಿತುಭಕ್ತಿಯಲಿ ॥
ರಾಗದಿಂಭಜಿಸುತಲಿ ಗುರುಪದ ।
ವಾಗ ಕರಡಿಗೆ ನೋಡಿ ಶರವದು ।
ತಾಗಿದೆರಳೆಯೊಲಾಡ ಲಿಂಗವದಿಲ್ಲದಿರೆ ಜವದಿ ॥ ೧೦೧ ॥

ಪ್ರಾಣವೀಯಲುನೆನೆಯುತಲಿ ಜಗ ।
ತ್ಪ್ರಾಣನಂದನತಡೆಯದಾಕ್ಷಣ ।
ಪ್ರಾಣವನು ತಾಬಿಡಲುಹವಣಿಸಿ ಕರಗಳನುಮುಗಿದು ॥
ಪ್ರಾಣಿಕೋಟಿಗಳನ್ನು ಸೃಜಿಯಿಸಿ ।
ಮಾಣದಲೆ ರಕ್ಷಿಸುತಕಡೆಯಲಿ ।
ಪ್ರಾಣಕೊಂಬುವ ದೇವನಿನ್ನಯ ಪದವನಂಬಿರುವೆ ॥ ೧೦೨ ॥

ವೀರದಕ್ಷನ ಶಿರವತರಿದಾ ।
ಘೋರನರಹರಿಯನ್ನು ಭಂಗಿಸಿ ।
ಶೂರಜ್ವಾಲಾವ್ಯಾಳನನುಪಮ ಪಂಚಮೇಢ್ರರಸು ॥
ಕಾರಿಸಿದಿ ರಕ್ತವನುಧರಣಿಯೊ ।
ಳಾರು ನಿನ್ನಸಮಾನರಿಲ್ಲವು ।
ವೀರಭದ್ರೇಶ್ವರನೆ ಪಾಲಿಪುದೆಂದು ನುತಿಸಲ್ಕೆ ॥ ೧೦೩ ॥

ಬಂದು ವೀರೇಶ್ವರನು ನುತಿಗೈ ।
ದಂದವೇನೆನೆ ಮುಗಿದುಕರಗಳ ।
ನಿಂದುಯನ್ನಯ ಲಿಂಗದೇವನದೃಶ್ಯನಾಗಿಹನೈ ॥
ತಂದೆತವಪದ ಕರ್ಪಿಸುವೆ ನದ ।
ರಿಂದಲಸುವೆಂದೆನಲು ಭಯಬೇ ।
ಡೆಂದು ಸಂತೈಸುತ್ತ ಫಾಲಾಂಬಕವನುರಿ ತೆರೆದು ॥ ೧೦೪ ॥

ಕೇಳು ಕೇಳಿಲೆಯನಲ ನೀ ನೀ ।
ರೇಳು ಲೋಕದೊಳಿನ್ನ ಭಕ್ತನ ।
ಶೀಲಲಿಂಗವನರಸಿ ತಹುದೆಂದಪ್ಪಣೆಯ ನೀಯೆ ॥
ಪೇಳಲೇನದ್ಭುತವಧಳ್ಳುರಿ ।
ಜ್ವಾಲೆಗಳನುಗುಳುತ್ತ ವ್ಯಾಪಿಸೆ ।
ತಾಳದಲೆ ಸಿಡಿಮಿಡಿಯುಗೊಂಡುದು ಸಕಲ ಜೀವಾಳಿ ॥ ೧೦೫ ॥

ಓಡಿಸುರಪತಿ ಪಿತಾಮುಹನೊಡ ।
ಗೂಡಿಹರಿಯುಡೆಗೈದಲೆಲ್ಲರು ।
ಕೂಡೆಶಂಕರ ನೆಡೆಗೆ ಪೋಗೀಹದನ ಬಿನ್ನೈಸೆ ॥
ಆಡಲಾಗದು ದೇವಧಳ್ಳುರಿ ।
ಕೂಡೆ ಸುಡುತಿಹುದಖಿಲ ಜಗಗಳ ।
ಕೇಡನಿದ ಪರಿಹರಿಸಿ ಪಾಲಿಪುದುದೆಂದು ಸೈಗೆಡೆಯೆ ॥ ೧೦೬ ॥

ಆರದೀ ಕೃತಿಯೆಂದು ಹರನಾ ।
ಶೂರಗಣ ಪುಂಗವರ ಕೇಳಲು ।
ವೀರಭದ್ರೇಶ್ವರನ ಫಾಲಾಂಬಕದ ರೌದ್ರವೆನೆ ॥
ಕಾರಣವ ದೇನೇತಕೀ ಪರಿ ।
ವೀರನೀರೇಳ್ ಜಗವ ದಹಿಸುವೆ ।
ಯಾರು ಮಾರಾಂತಿಹರು ಹದನೇನಿಹುದು ಪೇಳೆನಲು ॥ ೧೦೭ ॥

ಎನ್ನಭಕ್ತನು ಪವನಭವ ಸಂ ।
ಪನ್ನಮತಿಯುವನಿಷ್ಟಲಿಂಗವ ।
ನಿನ್ನದಾರೋ ಮಾಯುಗೈದಿಹರದು ನಿಮಿತ್ತದಲಿ ॥
ತನ್ನಪ್ರಾಣವನೀಗುತಿರಲವ ।
ನನ್ನುಸಂತವಿಸೀಗ ಲಿಂಗವ ।
ನಿನ್ನುತಹುದೆಂದೆನುತ ಲಾಜ್ಞೆಯ ನಿತ್ತೆನನಲಗೆನೆ ॥ ೧೦೮ ॥

ಏನಿದಚ್ಚರಿಯುಣುಗ ಓರ್ವನ ।
ಪ್ರಾಣರಕ್ಷಣೆಗಾಗಿ ಜಗವನು ।
ಹಾನಿಗೊಳಿಪರೆ ದಹಿಸುತೀ ವಿಧದಿಂದನೀನೆನಲು ॥
ಮಾಣದೀಕ್ಷಣ ಸೃಜಿಪೆ ನಶಿಸಿದ ।
ಪ್ರಾಣಿಕೋಟಿಗ ಳೆನ್ನಭಕ್ತನು ।
ಪ್ರಾಣವಳಿಯಲುಪಡೆವುದರಿದದರಿಂದ ದಹಿಸುತಲಿ ॥ ೧೦೯ ॥

ಲಿಂಗವನುತಂದಾತಗೀಯಲು ।
ಇಂಗಳಾಂಬಕದಣುವಕಳುಹಿದೆ ।
ಮಂಗಳಾತ್ಮಕ ಕ್ಷಣದೆ ಸೃಜಿಯಿಪೆ ನೀಜಗಂಗಳೆನೆ ॥
ಕಂಗಳತ್ರಯನಗುತ ದಿವಿಜರು ।
ಲಿಂಗದೇಹಿಗಳಲ್ಲವೇನೆನೆ ।
ಭಂಗತನು ದುಸ್ಸಂಗರವರೀ ಹನುಮಗೆಣೆಯುಹರೆ ॥ ೧೧೦ ॥

ಲಿಂಗದೇಹಿಯು ಲಿಂಗಪ್ರಾಣಿಯು ।
ಲಿಂಗಮಯಸರ್ವಾಂಗನಲ್ಲದೆ ।
ಲಿಂಗಕೋಟಿಯಧರಿಸಿ ಮೆರೆಯುವ ರೋಮ ರೋಮದಲಿ ॥
ಲಿಂಗವೇತಾನಾಗಿರಲ್ಕೀ ।
ಲಿಂಗವನು ಬಿಟ್ಟಿರದಭಾವದ ।
ಭಂಗಿಯನು ನೀನೋಡು ನೋಡೈ ತಂದೆಯೆಂದೆನಲು ॥ ೧೧೧ ॥

ಮೆಚ್ಚಿದನುಶಿವ ತನಯ ನಾಡಿದ ।
ಮಚ್ಚರಿಲ್ಲದನುಡಿಯ ಕೇಳುತ ।
ಚಚ್ಚರದಿ ಕರೆಯಿಸುತ ಮಾರುತಿಯನ್ನು ತನ್ನೆಡೆಗೆ ॥
ಬೆಚ್ಚಬೇಡೈಮಗನೆ ನಿನ್ನಯ ।
ಕೆಚ್ಚೆದೆಯನೋಡಲ್ಕೆ ನಾನೇ ।
ಇಚ್ಛೆಗೈದೀ ಲಿಂಗವನು ಮರೆಗೈದೆನೆಂದಿತ್ತು ॥ ೧೧೨ ॥

ಪರಸಲಿಕೆ ಪವನಜನು ಶಿವನಡಿ ।
ಗೆರಗಿ ವೀರೇಶ್ವರನಿಗೊಂದಿಸಿ ।
ಕರಯುಗಳ ಮುಗಿಯುತಲಿ ನಾನಾವಿಧದಿನುತಿಸುತಿರೆ ॥
ಸುರರು ಪೂಮಳೆಗರೆಯೆ ಪ್ರಮಥರು ।
ಹರುಷದಿಂ ಪರಸಲ್ಕೆಸರ್ವರು ।
ತೆರಳಿದರು ತಂತಮ್ಮ ನಗರಂಗಳಿಗೆ ತವಕದಲಿ ॥ ೧೧೩ ॥

ನೆನೆಯುತಲಿ ಪರಶಿವನ ಮಹಿಮೆಯ ।
ನೆನೆಯುತಲಿ ವೀರೇಶನನುಪಮ ।
ಘನತೆಶೌರ್ಯೋತ್ಸಾಹ ವಿಕ್ರಮ ಶಾಂತಿದಯಗಳನು ॥
ನೆನೆಯುತಲಿ ಪವಮಾನತನಯನ ।
ವಿನಯಭಕ್ತಿ ವಿರಾಗಶ್ರದ್ಧೆಯ ।
ನನುನಯದಿ ಮನದೊಳಗೆ ಸೇರ್ದರು ತಮ್ಮ ಪುರಗಳನು ॥ ೧೧೪ ॥

ಇದುವೆ ವೀರೇಶ್ವರನ ಲೀಲೆಯು ।
ಸದಮಲದ ಚಾರಿತ್ರ್ಯ ಹರುಷದೊ ।
ಳಿದನು ಮುನಿಸೂತಂಗೆ ಪೇಳ್ದ ಸನತ್ಕುಮಾರಮುನಿ ॥
ಇದನೆ ತಿಳುಹಿದ ರಾಘವಂಗತಿ ।
ಮುದದಿತಾನಾಶಂಭು ಭಟ್ಟನು ।
ಪದುಳದಿಂ ಶುಚಿಸ್ಮಿತೆಗೆಪೇಳಿದನಾ ದಧೀಚಿಮುನಿ ॥ ೧೧೫ ॥

ಇದುವೆಘನವಹಭೂತಿ ಮಹಿಮೆಯು ।
ಇದನು ಕೇಳ್ದವರಘಹರವು ತಾ ।
ನಿದರಮಹಿಮೆಯ ಪೇಳಲೊಶವೇ ಮೂರುಲೋಕದಲಿ ॥
ಇದನು ಕೇಳ್ದರು ಧನ್ಯರದರಿಂ ।
ದಿದನು ಪಠಿಸುತಪೂಜೆಗೈವರು ।
ಮುದದಿ ಪುರುಷಾರ್ಥಗಳನಾಲ್ಕನು ಪಡೆದು ಸುಖಿಸುವರು ॥೧೧೬॥

ಭೂಮಿಬೆಳೆಯಲಿ ಮಳೆಯುಸುರಿಯಲಿ ।
ಕಾಮಿತಾರ್ಥಗಳೆಲ್ಲ ಫಲಿಸಲಿ ।
ಕಾಮಿನೀಸುತ ಸುತೆಯು ರೊಡನತಿ ಸೌಖ್ಯದಿಂದಿರಲಿ ॥
ಕ್ಷೇಮವಾಗಲಿ ಬಂಧುಮಿತ್ರರ ।
ಸ್ತೋಮಕಾಪದವೆಲ್ಲ ತೊಲಗಲಿ ।
ಸ್ವಾಮಿ ಶ್ರೀವೀರೇಶನೀ ಕೃತಿಯನ್ನು ಪಠಿಪರಿಗೆ ॥ ೧೧೭ ॥

ಮೂರುಎಂಟೆಂಟೊಂದು ಶಕದಲಿ ।
ತೋರುವಾಪ್ಲವದೂರ್ಜೆಮಾಸದಿ ।
ವಾರಮಣತಿಥಿ ವಿಕಳಪಕ್ಷದಸೋಮವಾರದಲಿ ॥
ವಾರಿನಿಧಿಭವಧರ ಮಹೇಶ ನ ।
ಪಾರದಯದಿಂ ಪ್ರಕಟವಾಯ್ತೈ ।
ವೀರಭದ್ರೇಶ್ವರನ ಮಹಿಮಾಮೃತವು ಸಾಂಗದಲಿ ॥ ೧೧೮ ॥

ಈಶನೀಶಾನ್ಯಾಸ್ಯ ದುದಯಿಸಿ ।
ಕ್ಲೇಶಪಾಶ ವಿನಾಶನೆನಿಸುತ ।
ಲಾಶದೋಷಾದಿಗಳ ಪಾಶೆಗೆ ಶಿಲುಕದನವರತ ॥
ಲೇಸಬಯಸುತ ಜಗಕೆನೀ ಸಿಂ ।
ಹಾಸನವಕಾಶಿಯೊಳು ರಚಿಸಿದ ।
ಈಶ ವಿಶ್ವಾರಾಧ್ಯ ಜಗದಾಚಾರ್ಯ ಪಾಲಿಪುದು ॥ ೧೧೯ ॥

ವೀರಭದ್ರೇಶ್ವರನ ಮಹಿಮೆಯ ।
ಭೂರಿಭಕುತಿಯಲಿಂದ ಸಂತತ ।
ವಾರು ಪೂಜಿಸುತಿಹರೊ ಪಠಿಸುತಲಿಹರೊ ಪೇಳುವರೊ ॥
ಸಾರಿಕೇಳುವರೆಲ್ಲರಿಗೆ ಮನ ।
ವಾರಭೀಷ್ಟವನಿತ್ತು ಪಾಲಿಪ ।
ಮಾರಮಣ ವಿಧಿ ಸುರಪಯಕ್ಷೇಶಾದಿವಿನುತಶಿವ ॥ ೧೨೦ ॥

ಐದನೇ ಸಂಧಿ ಸಂಪೂರ್ಣ

ಅಂತು ಸಂಧಿ ೫ ಕ್ಕಂ ಪದನು ೬೧೨ ಕ್ಕಂ

ಮಂಗಳ ಮಸ್ತು



# ಶ್ರೀ ವೀರಭದ್ರಾಷ್ಟೋತ್ತರ ಶತನಾಮಾವಳಿಃ

ಓಂ ವೀರಭದ್ರಾಯನಮಃ
ಮಹಾಶೂರಾಯನಮಃ
ರೌದ್ರಾಯನಮಃ
ರುದ್ರಾವತಾರಾಯನಮಃ
ಶ್ಯಾಮಾಂಗಾಯನಮಃ
ಉಗ್ರದಂಷ್ಟ್ರಾಯನಮಃ
ಭೀಮನೇತ್ರಾಯನಮಃ
ಜಿತೇಂದ್ರಿಯಾಯನಮಃ
ಊರ್ಧ್ವಕೇಶಾಯನಮಃ
ಭೂತನಾಥಾಯನಮಃ ॥ ೧೦ ॥
ಖಡ್ಗ ಹಸ್ತಾಯನಮಃ
ತ್ರಿವಿಕ್ರಮಾಯನಮಃ
ವಿಶ್ವವ್ಯಾಪಿನೇನಮಃ
ಜ್ವಾಲಾಸುರಹರಾಯನಮಃ
ವಿಷ್ಣುಚಕ್ರ ವಿಭಂಜನಾಯನಮಃ
ಭದ್ರಕಾಳೀಪತಯೇನಮಃ
ಭದ್ರಾಯನಮಃ
ಭದ್ರಾಕ್ಷಾಭರಣಾನ್ವಿತಾಯನಮಃ
ಪೂಷದಂತಭಿದೇನಮಃ
ಉಗ್ರಾಯನಮಃ ॥ ೨೦ ॥
ಭಗವತೇನಮಃ
ಭಾವಗೋಚರಾಯನಮಃ
ಚಂಡಮೂರ್ತಯೇನಮಃ
ಚತುರ್ಬಾಹು ಚತುರಾಯನಮಃ
ಚಂದ್ರಶೇಖರಾಯನಮಃ
ಸತ್ಯಪ್ರತಿಜ್ಞಾಯನಮಃ
ಸರ್ವಾತ್ಮನೇನಮಃ
ಸರ್ವಸಾಕ್ಷಿಣೇನಮಃ
ನಿರಾಮಯಾಯನಮಃ
ನಿತ್ಯಾಯನಮಃ ॥ ೩೦ ॥
ನಿರ್ಧೂತಪಾಪೌಘಾಯನಮಃ
ನಿರ್ವಿಕಲ್ಪಾಯನಮಃ
ನಿರಂಜನಾಯನಮಃ
ಭಾರತೀನಾಸಿಕಾಚ್ಛೇದಾಯನಮಃ
ಭವರೋಗಮಹಾಭಿಷಜೇನಮಃ
ಭಕ್ತೈಕರಕ್ಷಾಯನಮಃ
ಬಲವತೇನಮಃ
ಭಸ್ಮೋದ್ಧೂಲಿತವಿಗ್ರಹಾಯನಮಃ
ವ್ಯಾಳಾಸುರಹರಾಯನಮಃ
ಧರ್ಮಮೂರ್ತಯೇನಮಃ ॥ ೪೦ ॥
ದೈತ್ಯಸಂಘಭಯಂಕರಾಯನಮಃ
ಪಾತ್ರಹಸ್ತಾಯನಮಃ
ಪಾವಕಾಕ್ಷಾಯನಮಃ
ಪದ್ಮಾಕ್ಷಾದಿನಮಸ್ಕೃತಾಯನಮಃ
ಮಖಾಂತಕಾಯನಮಃ
ಮಹಾತೇಜಸೇನಮಃ
ಮಹಾಭಯನಿವಾರಣಾಯನಮಃ
ಮಹಾವೀರಗಣಾಧ್ಯಕ್ಷಾಯನಮಃ
ಮಹಾಘೋರನೃಸಿಂಹಜಿತೇನಮಃ
ನಿಶ್ವಾಸಮಾರುತೋದ್ಧೂತ ಕುಲಪರ್ವತ ಸಂಚಯಾಯನಮಃ ॥ ೫೦ ॥
ದಂತನಿಷ್ಪೇಷಣಾರಾವಮುಖರೀಕೃತ ದಿಕ್ತಟಾಯನಮಃ
ಪಾದಸಂಘಟ್ಟನೋದ್ಭ್ರಾಂತಶೇಷಶೀರ್ಷ ಸಹಸ್ರಕಾಯನಮಃ
ಭಾನುಕೋಟಿ ಪ್ರಭಾಭಾಸ್ವನ್ಮಣಿ ಕುಂಡಲ ಮಂಡಿತಾಯನಮಃ
ಶೇಷಭೂಷಾಯನಮಃ
ಚರ್ಮವಾಸಸೇನಮಃ
ಚಾರುಹಸ್ತಾಯಜ್ವಲತ್ತನವೇನಮಃ

ಉಪೇಂದ್ರೇಂದ್ರಯಮಾದೀನಾಂದೇವಾ
ನಾಮಂಗತಕ್ಷಕಾಯನಮಃ
ಪಟ್ಟಿಶಪ್ರಾಸಪರಶುಗಧಾದ್ಯಾಯುಧ
ಶೋಭಿತಾಯನಮಃ
ಬ್ರಹ್ಮಾದಿದೇವದುಷ್ಪ್ರೇಕ್ಷ್ಯಪ್ರಭಾ
ಶುಂಭತ್ಕಿರೀಟಧೃತೇನಮಃ
ಕೂಷ್ಮಾಂಡಗ್ರಹ ಭೇತಾಳಮಾರೀಗಣ
ವಿಭಂಜನಾಯನಮಃ ॥ ೬೦ ॥
ಕ್ರೀಡಾಕಂದುಕಿತಾಜಾಂಡಭಾಂಡ
ಕೋಟೀವಿರಾಜಿತಾಯನಮಃ
ಶರಣಾಗತವೈಕುಂಠಬ್ರಹ್ಮೇಂದ್ರಾ
ಮರರಕ್ಷಕಾಯನಮಃ
ಯೋಗೀಂದ್ರಹೃತ್ಪಯೋಜಾತಮಹಾ
ಭಾಸ್ಕರಮಂಡಲಾಯನಮಃ
ಸರ್ವದೇವಶಿರೋರತ್ನ ಸಂಘೃಷ್ಟಮಣಿ
ಪಾದುಕಾಯನಮಃ
ಗ್ರೈವೇಯಹಾರಕೇಯೂರಕಾಂಚೀ
ಕಟಕಭೂಷಿತಾಯನಮಃ
ವಾಗತೀತಾಯನಮಃ
ದಕ್ಷಹರಾಯನಮಃ
ವಹ್ನಿಜಿಹ್ವಾನಿಕೃಂತನಾಯನಮಃ
ಸಹಸ್ರಬಾಹವೇನಮಃ
ಸರ್ವಜ್ಞಾಯನಮಃ ॥ ೭೦ ॥
ಸಚ್ಚಿದಾನಂದ ವಿಗ್ರಹಾಯನಮಃ
ಭಯಾಪಹಾಯನಮಃ
ಭಕ್ತಲೋಕಾರಾತಿತೀಕ್ಷ್ಣ ವಿಲೋಚ
ನಾಯನಮಃ
ಕಾರುಣ್ಯಾಕ್ಷಾಯನಮಃ
ಗಣಾಧ್ಯಕ್ಷಾಯನಮಃ
ಗರ್ವಿತಾಸುರದರ್ಪಹೃತೇನಮಃ
ಸಂಪತ್ಕರಾಯನಮಃ
ಸದಾನಂದಾಯನಮಃ
ಸರ್ವಾಭೀಷ್ಟಫಲಪ್ರದಾಯನಮಃ
ನೂಪುರಾಲಂಕೃತಪದಾಯನಮಃ ॥ ೮೦ ॥
ವ್ಯಾಲಯಜ್ಞೋಪವೀತಕಾಯನಮಃ
ಭಗನೇತ್ರಹರಾಯನಮಃ
ಬಂಧವಿಮೋಚಕಾಯನಮಃ
ತೇಜೋಮಯಾಯನಮಃ
ಕವಚಿನೇನಮಃ
ಭೃಗುಶ್ಮಶ್ರುವಿಲುಂಪಕಾಯನಮಃ
ಯಜ್ಞಪೂರುಷ ಶೀರ್ಷಘ್ನಾಯನಮಃ
ಯಜ್ಞಾರಣ್ಯದವಾನಲಾಯನಮಃ
ಭಕ್ತೈಕವತ್ಸಲಾಯನಮಃ ॥ ೯೦ ॥
ಭಗವತೇನಮಃ
ಸುಲಭಾಯನಮಃ
ಶಾಶ್ವತಾಯನಮಃ
ನಿಧಯೇನಮಃ
ಸರ್ವಸಿದ್ಧಿಕರಾಯನಮಃ
ದಾಂತಾಯನಮಃ
ಸಕಲಾಗಮಶೋಭಿತಾಯನಮಃ
ಭುಕ್ತಿ ಮುಕ್ತಿ ಪ್ರದಾಯನಮಃ
ಸರ್ವವ್ಯಾಧಿ ನಿವಾರಕಾಯನಮಃ
ದೇವಾಯನಮಃ ॥ ೧೦೦ ॥
ಅಕಾಲಮೃತ್ಯುಸಂಹರ್ತ್ರೇನಮಃ
ಕಾಲಮೃತ್ಯುಭಯಾಪಹರಾಯನಮಃ
ಗ್ರಹಾಕರ್ಷಣನಿರ್ಬಂಧಮಾರಣೋಚ್ಚಾ
ಟನಪ್ರಿಯಾಯನಮಃ
ಪರತಂತ್ರವಿನಿರ್ಬಂಧಾಯನಮಃ
ಪರಮಾತ್ಮನೇನಮಃ
ಪರಾತ್ಪರಾಯನಮಃ
ಸ್ವಮಂತ್ರಯಂತ್ರ ತಂತ್ರೌಘಪರಿ
ಪಾಲನತತ್ಪರಾಯನಮಃ
ಅಂಜನೇಯೇಷ್ಟಲಿಂಗಪ್ರದಾಯನಮಃ
ಇತಿಶ್ರೀವೀರಭದ್ರಾಷ್ಟೋತ್ತರ
ಶತನಾಮಾವಲಿಃ ಸಂಪೂರ್ಣ

## .... ತಿದ್ದುಪಡಿ ....

| ಪುಟ | ಪದ್ಯ | ಅಶುದ್ಧ | ಶುದ್ಧ |
|---|---|---|---|
| ೫ | ೧೫ | ಪ್ರಭುಗಳಧಿಕರ | ಪ್ರಭುಗಳಧಿಕೃತ |
| ೧೩ | ೨೫ | ಸಾಹೆಸವಕಾಂಚಿನು | ಸಾಹಸವಕಾಂಬಿನು |
| ೧೩ | ೨೫ | ನಾಕ್ಷಣದಿ | ಲಾಕ್ಷಣದಿಘರ್ಜಿಸಿದ |
| ೧೪ | ೨೭ | ದೆಶೆಯಾಳು | ದೆಶೆಯೊಳು |
| ೧೪ | ೩೦ | ವಂದನೆಯುು | ವಂದನೆಯು |
| ೧೮ | ೪೪ | ಭಾರಿತಾಲೆಯ | ಭಾರಿಶಾಲೆಯ |
| ೨೮ | ೧೮ | ಜನ್ನಗಧಿಪತಿ | ಜನ್ನದಧಿಪತಿ |
| ೨೯ | ೨೧ | ತೊರೆದವರು | ತೊರೆದಿವರು |
| ೩೩ | ೩೫ | ಜಡಜಭವ | ಜಡಜಭವನೀ |
| | | ಸಂಭವನನುನೀನೈ | ನದುನಿಮಿತ್ತದಿ |
| ೪೬ | ೯೦ | ಖಂಡಿಸುತಾಡಿದನು | ಖಂಡಿಸಲಾಡಿದನು |
| ೪೮ | ೯೮ | ನಗುತನುಡಿದ ನು | ನಗುತನುಡಿದನು |
| ೫೨ | ೧೧೩ | ತಿರದೆಕರಗಳ | ತಿರದೆಶಿರಗಳ |
| | | ಮುಗಿದುನಿಂದರು | ಬಾಗಿನಿಂದರು |
| ೬೪ | ೩೪ | ಪೇಳಲೇ ನಾ | ಪೇಳಲೇನಾ |
| ೮೪ | ೮೫ | ದೇಮುನಿಪತಿಯೆ | ದೇವಮುನಿಪತಿಯೇ |



---

ನಮ್ಮ ಮುಂದಿನ ಪ್ರಕಟಣೆ

# ನವಗ್ರಹ ಮಹಿಮೆ

---



ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಯೇನಮಃ

## ನಮ್ಮಲ್ಲಿ ದೊರೆಯುವ ಪುಸ್ತಕಗಳು



೧ ಸಂಕ್ಷಿಪ್ತ ಲಿಂಗಪೂಜಾವಿಧಿ ಕ್ರಯ ೦–೭೫ ಪೈ.
(ಅನೇಕ ಮಹತ್ವ ವಿಷಯುಗಳಿಂದೊಡಗೂಡಿದೆ)

೨ ಶಿವರಾತ್ರಿ ಮಹಿಮೆ ಕ್ರಯ ೦–೭೫ ಪೈ.

೩ ನಿತ್ಯಾಚಾರವಿಧಿ ಕ್ರಯ ೦–೨೬ ಪೈ.

೪ ನವಗ್ರಹ ಮಹಿಮೆ (ಅಚ್ಚಿನಲ್ಲಿದೆ)

### —ಮುಂದಿನ ಪ್ರಕಟಣೆಗಳು—

೧ ವರದಶಂಕರ ವ್ರತ

೨ ವೀರೇಶ್ವರ ವಿಜಯ

೩ ಜಲಶಿಲ್ಪಿ..